ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಶಂಕರಶೆಟ್ಟಿ ಪಾಟೀಲ

ಡಾ॥ ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

---

*ಅಧ್ಯಕ್ಷರು*
ಸಚ್ಚಿದಾನಂದ ಲ.ಖೋತ
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರಿಂದ)

*ಅಧ್ಯಕ್ಷರು*
ವಿ.ಆರ್. ಸುದರ್ಶನ್
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರವರೆಗೆ)

*ಸದಸ್ಯರು*

ಕೃಷ್ಣ
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ
ವಿಧಾನಸಭಾ ಸದಸ್ಯರು
ಆರ್. ಧ್ರುವನಾರಾಯಣ್
ವಿಧಾನಸಭಾ ಸದಸ್ಯರು
ಕಳಕಪ್ಪ ಜಿ. ಬಂಡಿ
ವಿಧಾನಸಭಾ ಸದಸ್ಯರು
ಡಾ|| ವೀರಬಸವಂತರೆಡ್ಡಿ ಮುದ್ನಾಳ್
ವಿಧಾನಸಭಾ ಸದಸ್ಯರು
ಡಾ. ಚಂದ್ರಶೇಖರ ಬಿ. ಕಂಬಾರ
ವಿಧಾನ ಪರಿಷತ್ ಸದಸ್ಯರು
ಮುಖ್ಯಮಂತ್ರಿ ಚಂದ್ರು
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಉಮಾಶ್ರೀ
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಶ್ರೀನಾಥ್
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)
ವೈ.ಎ. ನಾರಾಯಣಸ್ವಾಮಿ
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

| | |
|---|---|
| ಡಿ'ಸೋಜ ರಾಬಿನ್‌ಸನ್ | ಪ್ರಧಾನ ಕಾರ್ಯದರ್ಶಿ |

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ |
| ವಿ. ಶ್ರೀಶ್ | ಅಪರ ಕಾರ್ಯದರ್ಶಿ |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

27 ಜುಲೈ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ|| ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ **ಶಂಕರಶೆಟ್ಟಿ ಪಾಟೀಲ** ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ಸಚ್ಚಿದಾನಂದ ಲ.ಖೋತ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಹೈದ್ರಾಬಾದ ಕರ್ನಾಟಕವು ಹಿಂದೊಮ್ಮೆ ನಿಜಾಮನ ದುರಾಡಳಿತದಿಂದಾಗಿ ನಲುಗಿ ಹೋಗಿತ್ತು. ದುರಾಸೆಗೆ ಬಿದ್ದ ನಿಜಾಮನು ಹಿಂದೂ ಜನರನ್ನು ಲೂಟೊ, ಕಾಟೊ, ಬಾಟೊ ಎಂದಂದು ರಾಕ್ಷಸೀ ಪ್ರವೃತ್ತಿಯಿಂದ ವರ್ತಿಸತೊಡಗಿದನು. ಆರ್ಯ ಸಮಾಜದ ಮತ್ತು ಕಾಂಗ್ರೆಸ್ ಪಕ್ಷದ ಜನರು ರೊಚ್ಚಿಗೆದ್ದರು. ೧೯೪೭ ಆಗಸ್ಟ ೧೫ ರಂದು ಭಾರತಕ್ಕೆ ಸಿಕ್ಕ ಸ್ವಾತಂತ್ರ್ಯ ಹೈದ್ರಾಬಾದ ಕರ್ನಾಟಕದ ಜನತೆಗೆ ಒಂದು ವರುಷ ತಡಮಾಡಿ ಸ್ವಾತಂತ್ರ್ಯ ದೊರಕಿತು. ಸ್ವಾತಂತ್ರ್ಯಕ್ಕಾಗಿ ಹಿಂದೂ ಜನರ ಮಾನರಕ್ಷಣೆಗಾಗಿ ಹೋರಾಡಿದವರಲ್ಲಿ ಕಮಲಾಪೂರದ ಶ್ರೀ ಶಂಕರಶೆಟ್ಟಿ ಪಾಟೀಲರೂ ಒಬ್ಬರಾಗಿರುವರು.

ಚಿಕ್ಕವಯಸ್ಸಿನಲ್ಲಿಯೆ ಊರ ಗೌಡಕಿ ಮಾಡುತ್ತ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಶ್ರೀಪಾಟೀಲರಿಗೆ ೧೯೫೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಲು ಟಿಕೆಟ್ ದೊರೆತುದರಿಂದ ಕಾಳಗಿ ಮತಕ್ಷೇತ್ರದಿಂದ (ಕಲಬುರ್ಗಿ ಜಿಲ್ಲೆ) ಶಾಸಕ ಸ್ಥಾನಕ್ಕೆ ನಿಂತರು ಮತ್ತು ಪ್ರಚಂಡ ಬಹುಮತದಿಂದ ಆರಿಸಿಯೂ ಬಂದರು. ಸ್ವಾರ್ಥಕ್ಕಂಟಿಕೊಳ್ಳದ ನಿಸ್ಪೃಹಸೇವೆ ಸಲ್ಲಿಸುವ ಹುಮ್ಮಸ್ಸಿನಿಂದ ಈ ಪ್ರದೇಶದ ಸರ್ವತೋಮುಖದ ಅಭಿವೃದ್ಧಿಗಾಗಿ ಶ್ರಮಿಸಿದ ಶ್ರೀ ಪಾಟೀಲರ ಜೀವನ ಚರಿತ್ರೆ ಅದು ಯುವ ಪೀಳಿಗೆಗೆ ಆದರ್ಶವೂ ಅನುಕರುಣೀಯವೂ ಆದುದಾಗಿರುವುದು. ಅಂತೆಯೆ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮೀತಿಯ ಕೋರಿಕೆಯ ಪ್ರತಿಫಲವೆ ಈ ಗ್ರಂಥ. ವಿಧಾನ ಮಂಡಲದ ಕಾರ್ಯಕಲಾಪಗಳಲ್ಲಿ ಪಾಟೀಲರು ಕೇಳಿದ ಪ್ರಶ್ನೆಗಳು ಇಲ್ಲದಿದ್ದರೂ ಸಮಿತಿ ಚರಿತ್ರೆ ಬರೆಯಲು ಅನುಮತಿ ನೀಡಿದ್ದುದರಿಂದ ಪುಸ್ತಕ ರಚಿಸಲಾಗಿದೆ. ಅದಕ್ಕಾಗಿ ಸಮಿತಿಗೆ ವಿಶೇಷ ಕೃತಜ್ಞತೆಗಳು.

ಶ್ರೀಶಂಕರಶೆಟ್ಟಿ ಪಾಟೀಲರು ಮಾನವೀಯ ಮೌಲ್ಯಗಳನ್ನು ತಮ್ಮ ಬದುಕಿನುದ್ದಕ್ಕೂ ಅಳವಡಿಸಿಕೊಂಡ ಚಾರಿತ್ರ್ಯ ಶುದ್ಧಿಯ ಸಚ್ಚಾರಿತ್ರರು. ತೊಂಬತ್ತು ವರುಷಗಳ ತುಂಬುಜೀವನ ಇವರದಾಗಿದ್ದು, ರಾಜಕೀಯದಿಂದ ದೂರಿರುವರು. ಕಲಬುರ್ಗಿ ಜಿಲ್ಲೆಯ ಕಮಲಾಪೂರದ ಹಾಗೂ ಕಾಳಗಿ ಮತಕ್ಷೇತ್ರದ ಅಭಿವೃದ್ಧಿಗಾಗಿ, ಸಮಾಜದ ಶುದ್ಧೀಕರಣಕ್ಕಾಗಿ, ಈಗಲೂ ನಿಸ್ಸೀಮ ಸೇವೆಸಲ್ಲಿಸುತ್ತಲಿರುವ ಅಪ್ಪಟ ಗಾಂಧೀವಾದಿಗಳಿವರು. ತಮ್ಮ ದಿನ ನಿತ್ಯದ ನಡೆ

ನುಡಿಗಳಲ್ಲಿ ಸುಂದರ ಸಮನ್ವಯ ಸಾಧಿಸಿರುವ ಶ್ರೀ ಪಾಟೀಲರು ಯಾವ ಅಹಮಿಕೆಯಿಂದಲೂ ಬೀಗಿದವರಲ್ಲ. ಸೌಜನ್ಯದ ಸಾಕಾರಮೂರ್ತಿಗಳಾಗಿರುವರು.

ಶ್ರೀ ಶಂಕರಶೆಟ್ಟಿ ಪಾಟೀಲರು ಸಹಕಾರ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ರಾಜಕೀಯ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿದ ಅವರ ಸ್ನೇಹಿತರು, ಅನುಯಾಯಿಗಳು, ಶಿಷ್ಯರೆಲ್ಲ ಸೇರಿ ಕ್ರಿ.ಶ.೧೯೯೬ರಲ್ಲಿಅವರ ವರ್ಧಂತಿ ಮಹೋತ್ಸವವೊಂದನ್ನು ವಿಶ್ವನಾಥ ಪಾಟೀಲ ಹೆಬ್ಬಾಳ ಅವರ ಸ್ವಾಗತಾಧ್ಯಕತೆಯಲ್ಲಿ ಅಭೂತಪೂರ್ವವಾಗಿ ಆಚರಿಸಿದುದು ಕಮಲಾಪೂರ ಭಾಗದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಟ್ಟ ದಾಖಲಾತಿಯಾಗಿದೆ.

ಇಂಥ ಪುಣ್ಯಾತ್ಮರ ಜೀವನ ಚರಿತ್ರೆ ಬರೆಯಲು ಅವಕಾಶ ಕಲ್ಪಿಸಿದ ವಿಧಾನ ಪರಿಷತ್ತಿನ ಹಿಂದಿನ ಸಭಾಪತಿ ವಿ.ಆರ್. ಸುದರ್ಶನ್ ಅವರಿಗೂ, ಮುನ್ನುಡಿ ಬರೆದ ವಿಧಾನ ಸಭೆಯ ಸಭಾಧ್ಯಕ್ಷರಾದ ಕೃಷ್ಣ ಹಾಗೂ ವಿಧಾನ ಪರಿಷತ್ತಿನ ಈಗಿನ ಸಭಾಪತಿಗಳಾದ ಸಚ್ಚಿದಾನಂದ ಲ.ಖೋತ ಅವರಿಗೂ, ಬರೆಯಲು ಒತ್ತಾಯಿಸಿದ ಹಾಗೂ ಇದಕ್ಕೆ ಮುಮ್ಮಾತು ಬರೆದ ಗ್ರಂಥಾಲಯ ಉಪಸಮಿತಿಯ ಅಧ್ಯಕ್ಷರಾದ ವಿಶ್ವನಾಥ ಪಾಟೀಲ ಹೆಬ್ಬಾಳ ಅವರಿಗೂ, ಸಮಿತಿಯ ಸರ್ವಸದಸ್ಯರಿಗೂ, ಗ್ರಂಥ ಪರಿಶೀಲನೆ ಮಾಡಿದ ಸಂಪಾದಕ ಪ್ರೊ. ಎಲ್.ಎನ್. ಮುಕುಂದರಾಜ್ ಅವರಿಗೂ, ಬೇಗ ಬರೆದುಕೊಡಲು ಆಗ್ರಹಿಸಿದ ಅಧಿಕಾರಿಗಳಿಗೂ ಇತರ ಸದಸ್ಯರಿಗೂ ನಾನು ಉಪಕೃತನಿರುವೆ.

ಮಾಹಿತಿ ನೀಡಿದ ಹೇಮಚಂದ್ರ ಪಾಟೀಲರಿಗೂ, ಅಣವೀರಯ್ಯ ತಂಬೂರಿಯವರಿಗೂ, ಗ್ರಾಮದ ಹಿರಿಯರಾದ ಲಿಂ. ಕಂದಗೂಳ, ಪುಂಡಲಿಕಪ್ಪಾ, ಗುರುಪಾದಪ್ಪಾ ಮತ್ತು ಬರವಣಿಗೆಯಲ್ಲಿ ಸಹಕರಿಸಿದ ಡಾ. ಟಿ. ಎಂ.ಭಾಸ್ಕರ ಮೊದಲಾದವರಿಗೆ ನನ್ನ ವಂದನೆಗಳು. ಸುಭಾಷಚಂದ್ರ ಪಾಟೀಲರಿಗೂ ಗ್ರಾಮದ ಹಿರಿಯರಿಗೂ ವಂದನೆಗಳು.

**ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ**

**೫೫, ಶಿವ, ವಿಶ್ವೇಶ್ವರಯ್ಯ ನಗರ**

**ಸೇಡಂ ರೋಡ**

**ಗುಲಬರ್ಗಾ-೫೮೫೧೦೫**

# ಮುಮ್ಮಾತು

ಕಮಲಾಪೂರ ಎಂದರೆ ಕೆಂಪುಬಾಳೆ ಹಣ್ಣಿನ ನೆನಪಾಗುವಂತೆ ಮಾಜಿ ಶಾಸಕರಾದ ಶ್ರೀಶಂಕರಶೆಟ್ಟಿ ಪಾಟೀಲರ ಹೆಸರು ಕಣ್ಮುಂದೆ ಕಟ್ಟುತ್ತದೆ. ಕಮಲಾಪೂರವು ಇತಿಹಾಸಿಕ ತಾಣವೆನಿಸಿದಂತೆ ಧಾರ್ಮಿಕ ಹಾಗೂ ವಿವಿಧ ಸಂಸ್ಕೃತಿಗಳ ಸಂಗಮದ ದೊಡ್ಡ ಊರಾಗಿದೆ. ಇದು ಕಲಬುರ್ಗಿ, ಹುಮಾನಾಬಾದ, ಬೀದರ ರಾಜಮಾರ್ಗದಲ್ಲಿ ಇರುವುದು. ತೋಟ ಪಟ್ಟಿಗಳಿಂದಲೂ ಸಮೃದ್ಧವಾಗಿರುವ ಸುಂದರ ಪ್ರದೇಶ ಇದಾಗಿರುವುದು. ಶ್ರೀಶಂಕರಶೆಟ್ಟಿ ಪಾಟೀಲರು ಈ ಗ್ರಾಮದ ಪೋಲಿಸ ಗೌಡರು ಆಗಿದ್ದರು. ಊರ ಹಾಗೂ ಸುತ್ತಮುತ್ತಲಿನ ಸಾರ್ವಜನಿಕ ಕೆಲಸಕಾರ್ಯಗಳನ್ನು ಮಾಡಿ ಜನರ ಮೆಚ್ಚುಗೆಗೆ ಪಾತ್ರರಾಗಿರುವರು.

ಹೈದ್ರಾಬಾದ ಸಂಸ್ಥಾನವು ಭಾರತ ಸರಕಾರದಲ್ಲಿ ವಿಲೀನವಾದಾಗ ಇಲ್ಲಿಯ ರಾಷ್ಟ್ರೀಯ ಕಾಂಗ್ರೆಸ್ ನಾಯಕರ ಜೊತೆ ಕೆಲಸ ಮಾಡಿದರು. ಕ್ರಿ.ಶ.೧೯೫೬ರಲ್ಲಿ ಹೊಸ ಮೈಸೂರು ರಾಜ್ಯ ಉದಯವಾದಾಗ ಹೈದ್ರಾಬಾದ ಕರ್ನಾಟಕ ಜಿಲ್ಲೆಗಳು ಮೈಸೂರ ರಾಜ್ಯಕ್ಕೆ ಸೇರಿದವು. ಕಲಬುರ್ಗಿ ಜಿಲ್ಲೆಯ ಕಾಳಗಿ ಮತಕ್ಷೇತ್ರದಿಂದ ಕಾಂಗ್ರೆಸ್ಸಿನ ಹುರಿಯಾಳೆಂದು ಟಿಕೆಟ್ ದೊರೆತದ್ದರಿಂದ ಚುನಾವಣೆಗೆ ಸ್ಪರ್ಧೆಗಿಳಿದರು. ಪ್ರಚಂಡ ಮತಗಳಿಂದ ಗೆದ್ದು ಶಾಸಕರಾಗಿ ಆರಿಸಿಯೂ ಬಂದರು. ಈ ಮತ ಕ್ಷೇತ್ರದಲ್ಲಿ ರಸ್ತೆ, ಶಾಲೆ, ಕುಡಿಯುವ ನೀರು, ಆಸ್ಪತ್ರೆ ಮೊದಲಾದ ಸಾರ್ವಜನಿಕ ಕೆಲಸಗಳನ್ನು ಮಾಡಿಸಿ ಎಲ್ಲರ ಪ್ರೀತಿಗೆ ಪಾತ್ರರಾದರು. ಸಾಹಿತ್ಯ ಸಂಸ್ಕೃತಿಗೆ ಸಾಮಾಜಿಕ ಕ್ಷೇತ್ರಗಳಲ್ಲಿಯೂ ಸಾಕಷ್ಟು ಕೆಲಸ ಮಾಡಿದ್ದಾರೆ. ಬಸವ ಕಲ್ಯಾಣದ ಪುನರುತ್ಥಾನ, ಬಸವ ಪ್ರಸಾರ, ಶರಣ ಧರ್ಮದ ಪ್ರಚಾರದ ಕಾರ್ಯಗಳನ್ನು ಸಾಕಷ್ಟು ಮಾಡಿದ್ದಾರೆ. ಪೂಜ್ಯ ಬಂಥನಾಳ ಶಿವಯೋಗಿಗಳು, ಧಾರವಾಡದ ಮಹಾಂತಪ್ಪಗಳು, ಸೊಲ್ಲಾಪೂರದ ಬಾಬಾಸಾಹೇಬ ವಾರದ, ರತ್ನಪ್ಪಣ್ಣ ಕುಂಬಾರ, ಪ್ರಭೂರಾವ ಕಂಬಳಿವಾಲೆ, ಬಿ.ಡಿ. ಜತ್ತಿ, ಎಸ್.ನಿಜಲಿಂಗಪ್ಪ, ವೀರೇಂದ್ರ ಪಾಟೀಲ, ರಾಮಕೃಷ್ಣ ಹೆಗಡೆ, ಅಣ್ಣಾರಾವ ಗಣಮುಖಿ, ಚಂದ್ರಶೇಖರ ಪಾಟೀಲ, ಮಹಾದೇವಪ್ಪ ರಾಮಪುರೆ, ಎಸ್.ಆರ್.ಕಂಠಿ ಮೊದಲಾದ ಪೂಜ್ಯರ ಮತ್ತು ನೇತಾರರೊಂದಿಗೆ ಕೆಲಸ ಮಾಡಿದ್ದು ಸಾಮಾನ್ಯ ಜನರಿಗೂ ಗೊತ್ತಿದ್ದ ಸಂಗತಿ.

ಶ್ರೀ ಶಂಕರಶೆಟ್ಟಿ ಪಾಟೀಲರದು ಪರಿಶುದ್ಧವಾದ ಬದುಕು. ಇಂದಿನ ರಾಷ್ಟ್ರದ ಕಲುಷಿತ ರಾಜಕೀಯ ಮತ್ತು ಸಾಮಾಜಿಕ ಬದುಕಿನಲ್ಲಿ ಇವರ ಜೀವನ ಪಥ ದಾರಿದೀಪವಾಗಿದೆ. ಇವರೆಂದೂ ಆಡಂಬರ ಜೀವಿಗಳಲ್ಲ, ಖಾದಿಧೋತಿ, ಶರ್ಟು, ಟೋಪಿ, ಮೇಲೊಂದು

ಜಾಕೀಟು ಇವರ ವೇಷ. ಕಾಲ್ನಡಿಗೆಯಿಂದಲೇ ಇವರ ಓಡಾಟ, ಅಂದಿನ ತುಂಬು ಹರೆಯದಿಂದ ಆರಂಭವಾಗಿ ಇಂದಿನ ತೊಂಬತ್ತು ವಸಂತಗಳನ್ನು ದಾಟಿ ಬರುತ್ತಿರುವುದು ನಿಜಕ್ಕೂ ಇವರ ವ್ಯಕ್ತಿತ್ವದ ಹಿರಿಮೆಯಾಗಿದೆ. ಗುಂಡು ಹೊಡೆದವನಿಗೂ ಕ್ಷಮಿಸಿ ಜೀವ ಉಳಿಸಿಕೊಳ್ಳಲು ಹೇಳಿದ ಮಹಾತ್ಮ, ನಮ್ಮ ನಾಡಿನ ಕಿರಿಯ ಗಾಂಧಿ (ಛೋಟಾಗಾಂಧಿ) ಎಂದು ಪ್ರಸಿದ್ಧಿ ಪಡೆದವರಾಗಿದ್ದಾರೆ.

ಸಣ್ಣವನಾಗಿ ರಾಜಕೀಯದಲ್ಲಿ ಕುಗ್ಗು ಹಿಗ್ಗುಗಳಿಂದ ಸಾಗುತ್ತಿರುವ ನನಗೆ ಹಿರಿಯರಾದ ಶ್ರೀಶಂಕರಶೆಟ್ಟಿ ಪಾಟೀಲರು ಮಾರ್ಗದರ್ಶಕರು ಪ್ರೇರಕರೂ ಆಗಿರುವರು. ಸದಾ ಸಾತ್ವಿಕ ಜೀವನದ ಶ್ರೀಶಂಕರಶೆಟ್ಟಿ ಪಾಟೀಲರದು. ನನಗಷ್ಟೇ ಅಲ್ಲ ನಾಡಿನ ಯುವ ಪೀಳಿಗೆಗೆಲ್ಲ ಆದರ್ಶ ಪುರುಷರು, ಅನುಕರಣೀಯರು ಆಗಿರುವರು. ಇವರ ಚರಿತ್ರೆಯನ್ನು ಮನಂಬುಗುವಂತೆ, ಸರಳ ಭಾಷೆಯಲ್ಲಿ, ಸುಂದರವಾಗಿ ಬರೆದಿರುವ ಹಿರಿಯ ಸಾಹಿತಿಗಳಾದ ಡಾ.ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ ಅವರು ಅಭಿನಂದನಾರ್ಹರು.

**– ವಿಶ್ವನಾಥ ಪಾಟೀಲ ಹೆಬ್ಬಾಳ**
ವಿಧಾನ ಸಭಾ ಸದಸ್ಯರು ಹಾಗೂ
ವಿಧಾನ ಮಂಡಲ ಗ್ರಂಥಾಲಯ
ಉಪಸಮಿತಿಯ ಅಧ್ಯಕ್ಷರು

# ಪರಿವಿಡಿ


ಮುನ್ನುಡಿ V

ಲೇಖಕರ ಮಾತು VII

ಮುಮ್ಮಾತು IX

## ಭಾಗ-1

- ಸಂಸದೀಯಪಟು ಶಂಕರಶೆಟ್ಟಿ ಪಾಟೀಲರು - 03

## ಭಾಗ-2
## ಕಮಲಾಪೂರ ಗ್ರಾಮದ ಶಂಕರಶೆಟ್ಟಿ ಪಾಟೀಲರು

ಹಿನ್ನೆಲೆ
- ಗೌಡರ ಮನೆ - 10
- ಶಂಕರಶೆಟ್ಟಿ ತಂದೆ ರಾಚಪ್ಪ ಗೌಡರು - 11
- ತಾಯಿ ಬಸಮ್ಮ - 13
- ತಂದೆ ತಾಯಿಗಳು - 13

## ಭಾಗ-3
## ಜನನ-ಬಾಲ್ಯ, ವಿದ್ಯಾಭ್ಯಾಸ, ಮದುವೆ

- ಶಂಕರಶೆಟ್ಟಿ ಪಾಟೀಲರ ಜನನ - 17
- ಶಂಕರಶೆಟ್ಟಿ ಅವರ ಬಾಲ್ಯ - 17
- ಶಂಕರಶೆಟ್ಟಿ ಅವರ ವಿದ್ಯಾಭ್ಯಾಸ - 17
- ತಂದೆಯವರ ನಿಧನ - 19
- ಮದುವೆ - 20

## ಭಾಗ-4
## ಸರಕಾರಿ ಮತ್ತು ಸಮಾಜಸೇವೆ


- ಪೊಲೀಸ ಪಾಟೀಲರಾಗಿ ಗೌಡರು - 29
- ಸಮರ್ಪಣಭಾವ ಮೆರೆದ ಗೌಡರು - 32
- ಪರೋಪಕಾರಿ ಗೌಡರು - 32
- ಸ್ತ್ರೀ ಶಿಕ್ಷಣಕ್ಕೆ ಆದ್ಯತೆ - 32
- ಮನೆಯ ಮಗನೆನಿಸುವ ಗೌಡರು - 33
- ಕಾಲೇಜು ಪ್ರಾರಂಭ - 33
- ಹರಿಜನೋದ್ಧಾರಕರು - 34


## ಭಾಗ-5
## ರಜಾಕಾರರ ಹಾವಳಿ


- ಆರ್ಯ ಸಮಾಜದ ಸಕ್ರಿಯ ಸದಸ್ಯರು - 39
- ಕೋಮು ಸೌಹಾರ್ದತೆ ಮೆರೆದ ಗೌಡರು - 41
- ಶಿಷ್ಟ ರಕ್ಷಣೆ, ದುಷ್ಟ ನಿಗ್ರಹದ ಗೌಡರು - 41
- ಕಾಂಗ್ರೆಸ್ ಸಂಸ್ಥೆಯ ಕಾರ್ಯಕರ್ತರಾಗಿ ಗೌಡರು - 42
- ಪ್ರಚಾರರತ್ನ ಪ್ರಶಸ್ತಿ - 42
- ಗಡಿ ಶಿಬಿರಗಳಿಗೆ ಚಾಲನೆ - 43
- ಗುಲಬರ್ಗಾ ಜಿಲ್ಲಾ ಗಡಿಶಿಬಿರಗಳು - 43
- ಗೌಡರಿಗೆ ಗುಂಡೇಟು - 44
- ಮುಂಬೈ ಎಐಸಿಸಿ ಅಧಿವೇಶನ - 45

## ಭಾಗ-6
## ಪೊಲೀಸ್ ಕಾರ್ಯಾಚರಣೆ


- ದಿಗ್ಬಂಧನ - 49
- ಪೊಲೀಸ್ ಎಕ್ಷನ್ - 49
- ಹೈದ್ರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನ - 50
- ಭಾವೈಕ್ಯತೆಯಿಂದ ಬದುಕಲು ಗೌಡರ ಕರೆ - 51
- ಇಸ್ಮಾಯಿಲ್ ಸಾಬನ ತಪ್ಪೊಪ್ಪಿಗೆ - 51


## ಭಾಗ-7
## ಕರ್ನಾಟಕ ಏಕೀಕರಣಕ್ಕಾಗಿ ಗೌಡರ ಸೇವೆ


- ಹೈದ್ರಾಬಾದ ಸಂಸ್ಥಾನ ಸ್ವತಂತ್ರವಾಯಿತು - 55
- ಫಜಲ್ ಅಲಿ ಆಯೋಗ - 56
- ಕರ್ನಾಟಕ ರಾಜ್ಯ - 57


## ಭಾಗ-8

ಗಣ್ಯರ ದೃಷ್ಟಿಯಲ್ಲಿ ಶಂಕರಶೆಟ್ಟಿ ಪಾಟೀಲರು - 59


## ಭಾಗ-9
## ಉಪಸಂಹಾರ

## ಅನುಬಂಧ


- ಸನ್ಮಾನ ಪತ್ರ - 101
- ಭಾವಚಿತ್ರಗಳು - 107

## ಸಂಸದಪಟು ಶಂಕರಶೆಟ್ಟಿ ಪಾಟೀಲರು :

ಶಂಕರಶೆಟ್ಟಿ ಪಾಟೀಲ ಅವರು ಕರ್ನಾಟಕ ರಾಜ್ಯದ ಮಾಜಿ ಶಾಸಕರು. ಕ್ರಿ.ಶ.೧೯೫೭ರಿಂದ ೧೯೬೨ರವರೆಗೆ, ಐದುವರುಷಗಳ ಕಾಲ ಕರ್ನಾಟಕರಾಜ್ಯದ ವಿಧಾನಸಭೆಯ ಸದಸ್ಯರಾಗಿ ಜನತೆಯ ಸೇವೆ ಸಲ್ಲಿಸಿದವರಾಗಿದ್ದಾರೆ.

ಶಂಕರಶೆಟ್ಟಿ ಪಾಟೀಲರು ಕರ್ನಾಟಕ ರಾಜ್ಯದ ಗುಲಬರ್ಗಾಜಿಲ್ಲೆಯ ಚಿತಾಪೂರು ತಾಲೂಕಿನ ಕಾಳಗಿಮತಕ್ಷೇತ್ರದ ಕಾಂಗ್ರೆಸಪಕ್ಷದ ಅಭ್ಯರ್ಥಿಯಾಗಿ ಚುನಾವಣೆಗೆ ಸ್ಪರ್ಧಿಸಿ ಬಹುಮತದಿಂದ ಆಯ್ಕೆಯಾದವರಾಗಿದ್ದಾರೆ. ಗುಲಬರ್ಗಾ ತಾಲೂಕಿನ ೭೫ ಹಳ್ಳಿಗಳನ್ನು ಚಿತ್ತಾಪೂರ ತಾಲೂಕಿನ ೪೦ ಹಳ್ಳಿಗಳನ್ನು ಸೇರಿಸಿ ಕಾಳಗಿಮತಕ್ಷೇತ್ರವೊಂದನ್ನು ರಚಿಸಿದ್ದರು. ಸಾಮಾಜಿಕ ಕಾರ್ಯಕರ್ತರೂ ದೀನ ದಲಿತರ ಬಗೆಗೆ ಅನುಕಂಪ ಉಳ್ಳವರೂ ಸ್ವಾರ್ಥಕ್ಕಿಂತ ಪರೋಪಕಾರಕ್ಕಾಗಿಯೇ ತಮ್ಮ ಜೀವನವನ್ನು ಮಡುಪಾಗಿಟ್ಟ ಶಂಕರಶೆಟ್ಟಿ ಪಾಟೀಲರು ಜನಸೇವೆಗೆಂದೇ ಹುಟ್ಟಿ ಬಂದಂಥವರು. ಅಂತೆಯೇ ಜನರು ಇವರನ್ನು ಶಾಸಕರನ್ನಾಗಿ ನಿಲ್ಲಿಸಲು ಕಾಂಗ್ರೆಸ್ ಮುಖಂಡರನ್ನು ಜನ ಅಂದು ಒತ್ತಾಯಿಸಿದ್ದರು. ಕಮಲಾಪೂರ ಮತಕ್ಷೇತ್ರಕ್ಕೆ ಇವರನ್ನೇ ನಿಲ್ಲಿಸಬೇಕೆಂದು ಕೆಲ ಮುಖಂಡರು ಆಗ್ರಹಪಡಿಸುತ್ತಿದ್ದಾಗ ಸ್ವತಃ ಶಂಕರಶೆಟ್ಟಿ ಪಾಟೀಲರೇ ನನಗೆ ಬೇಡ, ಚಂದ್ರಶೇಖರ ಪಾಟೀಲರೇ ಇರಲಿ ಎಂದಂದು ಅವರ ಪರವಾಗಿ ತಾವೇ ಪ್ರಚಾರ ಮಾಡಿ ಅವರು ಆರಿಸಿಬರುವಂತೆ ಪ್ರಯತ್ನಿಸಿದುದು ಇತಿಹಾಸವಾಗಿದೆ. ಜನತೆಯ ಇಚ್ಛಾನುಸಾರ ಶಂಕರಶೆಟ್ಟಿ ಪಾಟೀಲರನ್ನು ಕಾಳಗಿ ಮತಕ್ಷೇತ್ರದಿಂದ ಆರಿಸಿ ತಂದದ್ದು ಈ ಭಾಗದ ಜನತೆಯ ಪುಣ್ಯ ವಿಶೇಷವಾಗಿರುವುದು.

ಶಂಕರಶೆಟ್ಟಿ ಪಾಟೀಲರು ತಮ್ಮ ಮತಕ್ಷೇತ್ರದ ಪ್ರಗತಿಗಷ್ಟೇ ಅಲ್ಲ, ಈ ಪ್ರದೇಶದ ಯಾರೇ ಯಾವುದೇ ಸಮಸ್ಯೆ ಇದ್ದರೂ ಅದಕ್ಕೆ ಸ್ಪಂದಿಸಿ ಸಮಸ್ಯೆಗಳನ್ನು ಪರಿಹರಿಸುತ್ತಲಿದ್ದರು. ಪಾಟೀಲರು ಜನಮೆಚ್ಚಿದ ನಾಯಕರು. ಹುಟ್ಟು ಹೋರಾಟಗಾರರು. ಸಾಮಾಜಿಕ ಕಾರ್ಯ ಕರ್ತರೂ ಆಗಿದ್ದು, ತಮ್ಮ ಮತಕ್ಷೇತ್ರದ ಪ್ರತಿಯೊಂದು ಹಳ್ಳಿಗೂ ಅಡ್ಡಾಡಿ ಅವರ ಕುಂದು ಕೊರತೆಗಳನ್ನು ಕೇಳಿಕೊಂಡು ಸಾಧ್ಯವಾದ ಮಟ್ಟಿಗೆ ಸಮಸ್ಯೆಗಳನ್ನು ನೀಗಿಸಿರುವರು. ಮೇಲಾಧಿಕಾರಿಗಳನ್ನು ಕಂಡು ಪ್ರಸಂಗ ಬಿದ್ದರೆ ಸಂಬಂಧಿಸಿದ ಮಂತ್ರಿಗಳನ್ನು ಭೆಟ್ಟಿಯಾಗಿ ಜನರ ಇಚ್ಛೆಗಳನ್ನು ಪೂರೈಸಿರುವರು.

ಪಾಟೀಲರು ಕೇಳುವ ಯಾವುದೇ ಸಮಸ್ಯೆಯಿದ್ದರೂ ಕೂಡಲೇ ಅಧಿಕಾರಿಗಳು ಆ ಕೆಲಸವನ್ನು ಮಾಡಿಕೊಡುತ್ತಲಿದ್ದರು.ಏಚು ಪೇಚುಗಳಿಲ್ಲದ ನಿಸ್ವಾರ್ಥ ಸೇವೆ ಸಲ್ಲಿಸುತ್ತ ಬಂದಿರುವ ಶ್ರೀಶಂಕರಶೆಟ್ಟರಿಗೆ ಎಲ್ಲರ[illegible] ಗೌರವ, ಆದರ. ಕೈಗೆತ್ತಿಕೊಂಡ ಕೆಲಸಕ್ಯಾರಗಳನ್ನು ಎಂದೂ

ಮಧ್ಯದಲ್ಲಿ ಅವರು ಕೈಬಿಡುವಂಥವರಲ್ಲಾ. ಸ್ವತಃ ಕೈಯಿಂದ ಖರ್ಚುಮಾಡಿ ಜನರ ಕೆಲಸಗಳನ್ನು ಮಾಡಿಸಿಕೊಡುತ್ತಲಿದ್ದರು. ಬಡವರ, ನಿರ್ಗತಿಕರ, ಶಿಕ್ಷಕರ ಕೆಲಸ ಕಾರ್ಯಗಳನ್ನು ಬೆನ್ನುಹತ್ತಿ ಮಾಡಿಸಿಕೊಡುವವರಾಗಿದ್ದರು. ಸಾರ್ವಜನಿಕ ಕೇಂದ್ರಗಳಲ್ಲಂತೂ ಶ್ರೀಶಂಕಟಶೆಟ್ಟಿ ಪಾಟೀಲರ ಸೇವೆ ಪ್ರಧಾನ ಪಾತ್ರವಹಿಸುತ್ತಲಿರುವುದು.

ಕಮಲಾಪೂರದ ಪ್ರಗತಿಗಂತೂ ಶಂಕರ ಶೆಟ್ಟರು ಬಹಳಷ್ಟು ಪರಿಶ್ರಮಿಸಿರುವರು. ಗುಡ್ಡದ ಓರೆಗುಂಟ ಬೆಳೆದುಕೊಂಡು ಬಂದಿದ್ದ ಈ ಗ್ರಾಮದ ಜನತೆ ರೋಡಿಗೆ ಹೋಗಬೇಕಾದರೆ ಸಾಕು-ಬೇಕಾಗುತ್ತಿತ್ತು. ಅದನ್ನರಿತ ಪಾಟೀಲರು ಒಳ್ಳೆಯ ದಾರಿ ಮಾಡಿಸಿದರು. ಕಲಿಯುವ ಮಕ್ಕಳಿಗಾಗಿ ಪ್ರಾಥಮಿಕ ಮಾಧ್ಯಮಿಕ ಪ್ರೌಢಶಾಲೆಗಳನ್ನು ತೆರೆಯಲು ಹಚ್ಚಿದರು. ಪದವಿಪೂರ್ವ ಹಾಗೂ ಪದವಿಕಾಲೇಜುಗಳನ್ನು ತೆರೆಯಿಸಿದರು. ಎಚ್.ಕೆ.ಇ.ಸೋಸಾಯಿಟಿಯ ಪಾಲಿಟೆಕ್ನಿಕ್ ಪ್ರಾರಂಭಿಸಿರುವರು. ಶಾಲಾಶಿಕ್ಷಕರ ತರಬೇತಿ ಕಾಲೇಜನ್ನೂ ಸರಕಾರದವತಿಯಿಂದ ಮಂಜೂರ ಮಾಡಿಸಿ, ಈ ಭಾಗದಲ್ಲಿ ಬಹಳಷ್ಟು ಜನ ಶಿಕ್ಷಕರಾಗಲು ಅನುಕೂಲ ಮಾಡಿಕೊಟ್ಟಿರುವರು. ಅಂಚೆಕಚೇರಿ, ಆರೋಗ್ಯ ಕೇಂದ್ರ, ಡಾಯೆಟ್ ಪ್ರಾರಂಭಗೊಂಡದ್ದೂ ಇವರಿಂದಲೇ ಎಂದರೆ ಅತಿಶಯೋಕ್ತಿಯೇನಲ್ಲ. ಇವರ ಪ್ರೇರಣೆಯಿಂದಲೇ ಸಮೀಪದ ಪಿಡೊ ಮೈರಾಡಾ ಕೂಡ ತಲೆಯೆತ್ತಿರುವುದು. ಜನಸೇವೆಯೆ ಜನಾರ್ಧನನ ಸೇವೆ ಎಂದು ಕೈಲಾದ ಮಟ್ಟಿಗೆ ಈಗಲೂ ೬೨ ವರುಷಗಳ ಈ ಇಳಿವಯಸ್ಸಿನಲ್ಲಿಯೂ ಸಮಾಜ ಸೇವಾಸಕ್ತರಾಗಿ ಬಾಳಿ ಬದುಕುತ್ತಿರುವುದು ನಮ್ಮೆಲ್ಲರ ಪುಣ್ಯವಿಶೇಷ.

ಶಂಕರಶೆಟ್ಟಿ ಪಾಟೀಲರದು ಹೊಟ್ಟೆ ಹೊರೆದುಕೊಳ್ಳುವ ಉದ್ಯೋಗವಲ್ಲ. ಕೀರ್ತಿಶನಿಯ ಬೆನ್ನು ಹತ್ತಿ ಬಂದುದಲ್ಲ. ಪ್ರಚಾರಗಿಟ್ಟಿಸಿಕೊಳ್ಳುವದಕ್ಕೆಂದು ಮೈತಾಳಿದ ಉದ್ಯೋಗವಲ್ಲ. ನಿಜಕ್ಕೂ ದೀನ-ದಲಿತರ, ಬಡವರ, ಗ್ರಾಮೀಣ ಜನತೆಯ ಉದ್ಧಾರಕ್ಕಾಗಿ ಮೀಸಲಾಗಿರುವಂತಹದು, ಅಂತೆಯೆ ಇತರರಿಗೂ ಅವರ ಬದುಕು ಮಾರ್ಗದರ್ಶಕವಾಗಿರುವದು. ಇಂಥವರ ಚರಿತ್ರೆಯನ್ನು ಇತರರೂ ಓದಿಕೇಳಿ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಲೆಂದು ಅವರು ಇಟ್ಟ ಹೆಜ್ಜೆಗಳನ್ನಿಲ್ಲಿ ಮೂಡಿಸಲಾಗುತ್ತಿದೆ.

ಶಂಕರ ಶೆಟ್ಟಿ ಪಾಟೀಲರ ಮತಕ್ಷೇತ್ರ ಕಾಳಗಿ; ಹುಟ್ಟೂರಾದರೊ ಕಮಲಾಪೂರ ಈ ಮತಕ್ಷೇತ್ರವನ್ನು ಚಂದ್ರಶೇಖರ ಪಾಟೀಲರಿಗೆ ಬಿಟ್ಟುಕೊಟ್ಟು ಇವರು ನೆರೆಯ ಮತಕ್ಷೇತ್ರಕ್ಕೆ ಚುನಾವಣೆಗೆ ನಿಲ್ಲಲು ಈ ಭಾಗದ ಮುಖಂಡರು ಮುಂದೆ ಬಂದರು. ಶಂಕರ ಶೆಟ್ಟರನ್ನು ಆದರದಿಂದ ಭವ್ಯ ಮೆರವಣಿಗೆಯಲ್ಲಿ ಕರೆತಂದರು. ಹೆಬ್ಬಾಳದ ಹನುಮಂತರಾವ ಪಾಟೀಲ, ಕಾಳಪ್ಪ ಪಾಟೀಲ, ಶಂಕರಪ್ಪ ಕಾಳಗಿ, ಭಾಗೋಡಿಯ ಶಿವಲಿಂಗಪ್ಪ ಪಾಟೀಲ, ನಾನಾ ಸಾಹೇಬ ಪಾಟೀಲರಲ್ಲದೆ

ಭರತನೂರ ಮಲಕೂಡ ಮುಗುಳನಾಗಾಯಿಯ ಮಹಾಸ್ವಾಮಿಗಳು ಶಂಕರ ಶೆಟ್ಟಿ ಪಾಟೀಲರನ್ನು ಆರಿಸಿ ತರುವಂತೆ ಆಶೀರ್ವದಿಸಿದರು. ಇವರ ವಿರುದ್ಧ ಸೊಸ್ಯಾಲಿಸ್ಟ ಪಕ್ಷದ ಪರವಾಗಿ ವೀರಣ್ಣ ತಿಮ್ಮಾಜಿ ನಿಂತಿದ್ದರು. ಗುಲಾಬ ನಬಿ ಆಜಾದ ಅವರು ಕಮ್ಯುನಿಸ್ಟಪಾರ್ಟಿ ಅಭ್ಯರ್ಥಿಯಾಗಿ ಸ್ಪರ್ಧೆಗೆ ನಿಂತಿದ್ದರು. ಶಂಕರ ಶೆಟ್ಟಿ ಅವರ ಸಾಮಾಜಿಕ ಸೇವೆಯನ್ನು ಮೊದಲಿನಿಂದಲೂ ಮೆಚ್ಚಿಕೊಂಡಿದ್ದ, ಕಾಳಗಿ ಮತಕ್ಷೇತ್ರದ ಜನತೆ ಪ್ರಚಂಡಮತದಿಂದ ಅವರನ್ನು ಚುನಾವಣೆಯಲ್ಲಿ ಆರಿಸಿ ತಂದರು. ಇಂದಿನ ಎಂ..ಎಲ್.ಎ. ಗಳಾಗಿರುವ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ ಅವರ ತಂದೆಯವರಾದ ಶ್ರೀ ಹನುಮಂತರಾವ ಪಾಟೀಲರಿಗೆ ತಾವೇ ಆರಿಸಿ ಬಂದಷ್ಟು ಸಂತೋಷವಾದುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಆರಿಸಿಬಂದ ಮೇಲೆ ಪ್ರತಿ ಹಳ್ಳಿಗೂ ಅಡ್ಡಾಡಿ ಅವರ ಕುಂದು ಕೊರತೆಗಳನ್ನು ಗೌಡರು ಪರಿಹರಿಸಿದರು.

ಕಾಳಗಿ ಮತಕ್ಷೇತ್ರದಲ್ಲಿ ಶಂಕರ ಶೆಟ್ಟಿ ಪಾಟೀಲರು ಕೈಕೊಂಡ ಸುಧಾರಣೆಗಳು ಹಲವಾರಿವೆ. ಈ ಕ್ಷೇತ್ರದಲ್ಲಿ ಮುಖ್ಯರಸ್ತೆಗೆ ಹೋಗಿ ಕೂಡಲು ಹಳ್ಳಿಗಳಿಗೆ ಒಂದೂ ರಸ್ತೆ ಇದ್ದಿರಲಿಲ್ಲ. ಇಪ್ಪತ್ತು ಮೂವತ್ತು ಮೈಲುಗಳವರೆಗೂ ಕಾಲುದಾರಿಯಲ್ಲಿ ನಡೆದುಕೊಂಡೇ ಹೋಗಬೇಕಾಗಿತ್ತು. ಮಳೆಗಾಲದಲ್ಲಂತೂ ಪ್ರವಾಹದಿಂದ ನೀರು ಸುತ್ತುವರೆದು ಹಳ್ಳಿಗಳು ನಡುಗಡ್ಡೆಗಳಂತಾಗುತ್ತಿದ್ದವು. ಉಪಜೀವನಕ್ಕಾಗಿ ಬೇಕಾಗುವ ದಿನನಿತ್ಯದ ವಸ್ತುಗಳು ದೊರೆಯುತ್ತಿದ್ದಿರಲಿಲ್ಲ. ಇದನ್ನು ಗುರುತಿಸಿದ ಗೌಡರು ಕಾಳಗಿಯಿಂದ ಮಾಡಬಾಳವರೆಗೆ, ಸ್ಟೇಟ್ ಫಂಡಿನಿಂದ ರಸ್ತೆ ಮಾಡಿಸಿಕೊಟ್ಟರು. ರೇವಣಸಿದ್ದೇಶ್ವರ ಕೂಡು ರಸ್ತೆಯೂ ಇವರ ಅವಧಿಯಲ್ಲೇ ಆದದ್ದು. ಕಾಳಗಿಯಲ್ಲಿ ಪೋಲಿಸ್ ಸ್ಟೇಶನ್, ಶಾಲಾಕಟ್ಟಡ ಹಾಗೂ ಬಹಳಷ್ಟು ಹಳ್ಳಿಗಳಲ್ಲಿ ಅಂದರೆ ಕೋಳಿ ಕೂಗಿದ ಊರುಗಳಲ್ಲಿ ಒಂದು ಶಾಲೆಯನ್ನು ಮಂತ್ರಿಗಳಿಗೆ ಆಗ್ರಹಿಸಿ ಪ್ರಾರಂಭಿಸಿದರು. ಆ ಶಾಲೆಗಳಿಗೆ ಶಿಕ್ಷಕರನ್ನು ನೇಮಣೂಕಿ ಮಾಡಲು ಹಚ್ಚಿದರು. ತಮ್ಮ ಮತಕ್ಷೇತ್ರದ ಪ್ರತಿಯೊಂದು ಹಳ್ಳಿಗೂ ಭೆಟ್ಟಿನೀಡಿ ಅವರ ಕುಂದುಕೊರತೆಗಳನ್ನು ಕೇಳಿಕೊಂಡು, ಸಂಬಂಧಪಟ್ಟ ಮಂತ್ರಿ ಹಾಗೂ ಅಧಿಕಾರಿಗಳನ್ನು ಖುದ್ದಾಗಿ ಭೆಟ್ಟಿಯಾಗಿ ಗ್ರಾಮೀಣ ಭಾಗದ ಅಭಿವೃದ್ಧಿಗಾಗಿ ಶ್ರೀ ಶಂಕರ ಶೆಟ್ಟಿ ಪಾಟೀಲರು ಮನಸಾಪೂರ್ವಕ ಶ್ರಮಿಸಿದರು. ಕುಡಿಯುವ ನೀರು, ರಸ್ತೆ, ಆರೋಗ್ಯ ಶಿಕ್ಷಣ ಹಾಗೂ ಸಾಹಿತ್ಯ, ಸಂಸ್ಕೃತಿಯ ತಿಳುವಳಿಕೆಗೆ ಆದ್ಯತೆ ನೀಡಿದರು.

ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ
ಗಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ
ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂದರೆ
ಬಿನ್ನಾಣ ತಪ್ಪಿತ್ತು ಗುಹೇಶ್ವರಾ.

– ಅಲ್ಲಮ ಪ್ರಭುದೇವರು

ಹಿನ್ನೆಲೆ:

ಕಮಲಾಪೂರ ಹೆಸರಿನ ಗ್ರಾಮಗಳು ಕರ್ನಾಟಕದಲ್ಲಿ ಬಹಳಷ್ಟಿವೆ. ನಾನು ಹೇಳಬಯಸಿರುವುದು ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಸಮೀಪದ ಒಂದು ದೊಡ್ಡಗ್ರಾಮವಾಗಿದೆ. ಇದು ಹುಮ್ನಾಬಾದಿಗೆ ಹೋಗುವ ರಾಜ್ಯ ಹೆದ್ದಾರಿಯಲ್ಲಿ ೪೦ ಕಿ.ಮಿ.ದೂರದಲ್ಲಿರುವಂತಹದು. ಕಮಲಾಪೂರ ಬಾಳೆಹಣ್ಣು ಎಂದು ಮಾರಾಟಗಾರರು ಪ್ರವಾಸಿಗರಿಗೆ ಮುಗಿಬೀಳುತ್ತಿರುವದುಂಟು. ಇಲ್ಲಿಯ ಮಣ್ಣಿನ, ನೀರಿನ ಗುಣವೆನ್ನಬೇಕು, ಇಲ್ಲಿ ಬೆಳೆಯುವ ಕೆಂಪು ಬಾಳೆಗೆ ವಿಶೇಷ ರುಚಿ, ಅಂತೆಯೆ ಹೆಚ್ಚಿನ ಬೇಡಿಕೆ.

ಕಮಲಾಪೂರ ಗ್ರಾಮದ ಜನಸಂಖ್ಯೆ ಇಂದು ಸುಮಾರು ಹತ್ತು ಸಾವಿರ. ಇದು ಎತ್ತರದ ಗುಡ್ಡದ ಸುತ್ತಲೂ ಹಬ್ಬಿರುವಂಥದ್ದಾಗಿದೆ. ಹಿಂದೊಮ್ಮೆ ರಾಜವೈಭದಿಂದ ಮೆರೆದ ಐತಿಹಾಸಿಕ ಪ್ರದೇಶವೆನಿಸಿರುವುದು. ಪೂರ್ವದಿಂದ ಪಶ್ಚಿಮಕ್ಕೆ ಹಬ್ಬಿರುವ ಈ ಗ್ರಾಮದ ಉತ್ತರ ದಿಕ್ಕಿನಲ್ಲಿ ಜುಳು ಜುಳು ಹರಿಯುವ ಹಳ್ಳವಿದೆ. ಪಳೆಯುಳಿಕೆಗಳಾಗಿ ನಿಂತಿರುವ ಉತ್ತರದಿಕ್ಕಿನ ಹೊರವಲಯದಲ್ಲಿ ಸಂಗಮೇಶ್ವರ ದೇವಾಲಯವೊಂದಿದೆ. ಅದರ ಮುಂದೆ ನಂದಿ ವಿಗ್ರಹ ಶೋಭಿಸುತ್ತಲಿರುವುದು. ಗ್ರಾಮದ ಮಧ್ಯದಲ್ಲಿ ಈಶ್ವರಮಂದಿರ, ವೀರಭದ್ರ ದೇವಾಲಯಗಳು ಹಾಳುಸುರಿಯುತ್ತಿವೆ.

ಕಂತಿಮಠ, ವಿರಕ್ತಮಠ, ಶರಭೇಶ್ವರ ಮಠ, ಭೋರಮಠ, ತಾವರೆಮಠ ,ಕೋಡಿಮಠ, ಹಿರೇಮಠ, ಮಹಾಂತಮಠ, ಸಿದ್ಧ ರಾಮೇಶ್ವರಮಠ ಹೀಗೆ ಹದಿನೈದಕ್ಕು ಹೆಚ್ಚು ಮಠಗಳಿದ್ದುದನ್ನು ಅರಿತಾಗ ವೀರಶೈವರು ಈ ಗ್ರಾಮದಲ್ಲಿ ಬಹಳಷ್ಟು ಜನರಿದ್ದದ್ದು ತಿಳಿದು ಬರುತ್ತದೆ. ವೀರಶೈವ ಧರ್ಮ ಸಂಸ್ಕೃತಿಯ ಕೇಂದ್ರ ಸ್ಥಾನವೂ ಇದಾಗಿರುವುದು. ಜೇಡರ (ದೇವರ) ದಾಸಿಮಯ್ಯನ ಗುಡಿಯೂ ಇಲ್ಲಿ ಇರುವದು. ನೇಕಾರ ಕಾಯಕದ ವೀರಶೈವರೂ ಇಲ್ಲಿರುವರು. ದಕ್ಷಿಣ ದಿಕ್ಕಿನಲ್ಲೊಂದು ಸುಂದರವಾದ ರಾಮತೀರ್ಥವೊಂದಿರುವುದು. ಹಿಂದೂ ಮುಸ್ಲಿಂರ ಭಾವೈಕ್ಯತೆಯ ಕುರುಹಾಗಿ ಕಮಲಾಪೂರವು ಉಳಿದುಕೊಂಡಂತಿದೆ. ಇಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳಿದ್ದು ಮತ್ತೆ ಶಂಕರಲಿಂಗ, ನಗರೇಶ್ವರ, ಬನಶಂಕರಿ ಗುಡಿಗಳೂ ಇದ್ದು ಕೆಳಗೆ ಗ್ರಾಮ ದೇವತೆಗಳ ಗುಡಿಗಳೂ ಇರುವವು.

ವಿಜಾಪುರದ ಆದಿಲ್ ಶಹಾನು ಈ ಭಾಗದ ಮೇಲೆ ಪ್ರಭುತ್ವ ಹೊಂದಿದಾಗ 'ಕಮಲಬೇಗಂ' ಹೆಸರಿನ ತನ್ನ ಹಿರಿಯ ಮಗಳಿಗೆ ಕೊಟ್ಟಿದ್ದ ಜಾಸೂರ ಹೆಸರಿನ ಈ ಗ್ರಾಮವೇ ಮಗಳ ಹೆಸರಿನಿಂದಾಗಿ ಕಮಲಾಪೂರ ಎಂದಾಗಿರುವುದೆಂದು ಹೇಳುವ ವಾಡಿಕೆಯಿದೆ. ಈ

ಕಮಲಾಪೂರದಲ್ಲಿ ವಿವಿಧ ಕಾಯಕದ ವಿವಿಧ ಜಾತಿಜನಾಂಗದ ಜನರೂ ಇಲ್ಲಿ ವಾಸಮಾಡಿಕೊಂಡಿರುವರು. ಹಿಂದೆ ಯಾದವರು, ರಾಷ್ಟ್ರಕೂಟರು, ಚಾಲುಕ್ಯರು, ಬಹಮನಿ ಅರಸರು ನಿಜಾಮರಾಜರು ಆಳಿಹೋಗಿರುವ ಈ ಪ್ರದೇಶದಲ್ಲಿ ಮುಸಲ್ಮಾನರು ದಬ್ಬಾಳಿಕೆ ನಡೆಸಿದುದು ಜಗಜ್ಜಾಹೀರ ಸಂಗತಿ. ಆದರಿಂದ ಹಿಂದೂ ಸಂಸ್ಕೃತಿಗೆ ಕಲಂಕ ತಟ್ಟಿರುವ ಮಾತು. ಆರ್ಯ ಸಮಾಜ, ವೀರಶೈವ ತರುಣ ಸಂಘ, ಮಠಗಳ ಕಾರ್ಯಚಟುವಟಿಕೆಗಳಿಂದ ಹಿಂದೂ ಜನತೆ ಉಸಿರು ಬಿಡುವಂತಾದದ್ದನ್ನು ನೆನೆಸಿಕೊಳ್ಳಬಹುದಾಗಿದೆ.

**ಗೌಡರ ಮನೆ :**

ಭಾರತದೇಶ ಹಳ್ಳಿಗಳ ದೇಶ, ಪ್ರತಿಯೊಂದು ಹಳ್ಳಿಯ ಆಡಳಿತ ಊರಿನ ಪೋಲಿಸಗೌಡ, ಮಾಲಿಪಾಟೀಲ ಮತ್ತು ಕುಲಕರ್ಣಿ ನಡೆಸುತ್ತಲಿದ್ದರು. ಅವರು ಗ್ರಾಮದ ಶಾಂತಿ ಸುವ್ಯವಸ್ಥೆ ನೋಡಿಕೊಳ್ಳುತ್ತಲಿದ್ದರು. ಇವರ ಆಧೀನದಲ್ಲಿ ಅನೇಕ ಜನರು ಗ್ರಾಮಸೇವಕರಾಗಿ ಕೆಲಸ ಮಾಡುತ್ತಲಿರುವರು. ಕೊಲೆ, ಸುಲಿಗೆ, ಗಲಭೆಗಳಾಗದಂತೆ ಪೋಲಿಸಪಾಟೀಲರು ಎಚ್ಚರ ವಹಿಸುವುದುಂಟು.

ಕಮಲಾಪೂರದ ಪೋಲಿಸಪಾಟೀಲರ ಮನೆತನವು ವಂಶಪಾರಂಪರ್ಯವಾಗಿ ಗೌಡಕಿ ಮಾಡುತ್ತ ಬಂದಿರುವಂತಹದ್ದು ಮಲಶೆಟ್ಟೆಪ್ಪ ಅವರ ತರುವಾಯ ಗುರುಬಸೆಟ್ಟೆಪ್ಪ ಎಂಬವರೂ ಈ ಮನೆತನದ ಗೌಡಕಿ ಮಾಡುತ್ತ ಬಂದವರು. ಇವರ ತರುವಾಯ ವೀರಬಸಪ್ಪ ಅವರು ಗೌಡರಾಗಿದ್ದರು. ಈ ವೀರಬಸಪ್ಪ ಅವರ ಲಗ್ನವು ನಿರ್ಣಾಗ್ರಾಮದ ವೀರಮ್ಮ ಅವರೊಂದಿಗೆ ಆಗಿತ್ತು. ವೀರಮ್ಮ ವೀರಪ್ಪ ದಂಪತಿಗಳು ಒಬ್ಬರಿಗೊಬ್ಬರು ಅತ್ಯಂತ ಪ್ರೀತಿಯಿಂದ ಸುಖವಾಗಿದ್ದರು. ಬಹಳ ವರುಷಗಳಾದರೂ ಈ ದಂಪತಿಗಳಿಗೆ ಮಕ್ಕಳಾಗಲಿಲ್ಲ. ಈ ಚಿಂತೆಯಲ್ಲಿ ಸೊರಗಿ ಸಣ್ಣಾದರು. ವೀರಮ್ಮಗೌಡತಿ ಧೈರ್ಯದಿಂದ ತನ್ನ ಗಂಡನ ಮನವೊಲಿಸಿ ಅವರಿಗೆ ಎರಡನೇ ಲಗ್ನ ಮಾಡಿಕೊಳ್ಳಲು ಒಪ್ಪಿಸಿದರು. ಆ ಪ್ರಕಾರ ವೀರಬಸಪ್ಪ ಗೌಡರಿಗೆ ಬೀದರ ಜಿಲ್ಲಾ ಹುಮ್ನಾಬಾದ ತಾಲೂಕಿನ ಧುಮ್ಮನಸೂರದ ಹಿಂದೊಡ್ಡಿ ಮನೆತನದ ಸಂಗಮ್ಮರೊಂದಿಗೆ ಲಗ್ನಮಾಡಿದರು.

ಸಂಗಮ್ಮ ಅವರಿಗೂ ಮಕ್ಕಳಾಗಲಿಲ್ಲ. ವೀರಮ್ಮ ತಾಯಿ ಮತ್ತು ವೀರಪ್ಪ ಗೌಡರು ಇನ್ನೂ ಚಿಂತಾಕ್ರಾಂತರಾದರು. ಸಂಗಮ್ಮ ಗೌಡತಿಗೆ ಮನೆತನದ ಎಲ್ಲ ಜವಾಬ್ದಾರಿಯನ್ನು ವಹಿಸಿಕೊಟ್ಟರು. ಜವಾಬ್ದಾರಿಯನ್ನು ಹೊತ್ತುಕೊಂಡ ಸಂಗಮ್ಮ ಗೌಡತಿಯು ಹೊಲ–ಮನೆ ಕೆಲಸ ಕಾರ್ಯಗಳನ್ನು ವ್ಯವಸ್ಥಿತ ರೀತಿಯಿಂದ ನೋಡಿಕೊಳ್ಳತೊಡಗಿದರು.

ಎಷ್ಟೇ ಆಸ್ತಿ ಇದ್ದರೂ ಮಕ್ಕಳಿಲ್ಲದ ಕೊರತೆ ಕಾಡತೊಡಗಿತು. ಸಂಗಮ್ಮ ಗೌಡತಿ ವಿಚಾರ ಮಾಡ ತೊಡಗಿದರು. ಯೋಚಿಸಿ ಇನ್ನು ತನಗೂ ಮಕ್ಕಳಾಗುವುದಿಲ್ಲ ಎಂದು ಕೊಂಡು ದತ್ತಕ ಪುತ್ರನನ್ನು ಮನೆಯ ದೀಪ ಬೆಳಗಲು, ಪಡೆದುಕೊಳ್ಳುವುದು ಉಚಿತ ಎಂಬ ತೀರ್ಮಾನಕ್ಕೆ ಬಂದರು. ಅಕ್ಕ ವೀರಮ್ಮ ಗೌಡತಿಯ ಮುಂದೆ ತನ್ನ ಅಳಲನ್ನು ತೋಡಿಕೊಂಡರು. ವೀರಮ್ಮ ಗೌಡತಿಯ ಸಹೋದರ ನಿರ್ಣಾ ಗ್ರಾಮದ ಮಡಿವಾಳಪ್ಪ ಅವರಿಗೆ ಹೇಗೂ ಇಬ್ಬರು ಗಂಡು ಮಕ್ಕಳಿದ್ದರು. ಇವರಲ್ಲಿ ಚಿಕ್ಕವರಾದ ರಾಚಪ್ಪ ಗೌಡರನ್ನು ದತ್ತಕ ಪುತ್ರನನ್ನಾಗಿ ತೆಗೆದುಕೊಳ್ಳುವುದು ಒಳಿತು ಎಂದು ಸಂಗಮ್ಮ ಗೌಡತಿ ವೀರಮ್ಮ ಗೌಡತಿಯ ಮುಂದೆ ಪ್ರಸ್ತಾಪಿಸಿದರು. ವೀರಮ್ಮ ಗೌಡತಿಯವರಿಗೆ ಇದು ಸರಿಯೆನಿಸಿತು. ಇಬ್ಬರೂ ಕೂಡಿ ಯಜಮಾನರಾದ ವೀರಪ್ಪಗೌಡರನ್ನು ಈ ವಿಷಯಕ್ಕೆ ಒಪ್ಪಿಸಿದರು.

ಒಂದುದಿನ ವೀರಮ್ಮ ಗೌಡತಿ ಮತ್ತು ವೀರಪ್ಪಗೌಡರು ನಿರ್ಣಾ ಗ್ರಾಮಕ್ಕೆ ಹೋದರು. ತಾವಿಬ್ಬರೂ ಬಂದ ಉದ್ದೇಶವನ್ನು ತಿಳಿಸಿದರು. ಸಹೋದರ ಮಡಿವಾಳಪ್ಪನವರು ಸಹೋದರಿ ವೀರಮ್ಮ ಅವರ ಮಾತು ಮೀರುವಂತಿರಲಿಲ್ಲ. ಆಗಲಿ ಎಂದು ಸಂತೋಷದಿಂದ ಮಗ ರಾಚಪ್ಪಗೌಡರನ್ನು ದತ್ತಕ ಕೊಡಲು ಒಪ್ಪಿಕೊಂಡರು.

**ಶಂಕರಶೆಟ್ಟಿ ತಂದೆ ರಾಚಪ್ಪ ಗೌಡರು :**

ಒಂದು ಸುಮೂಹೂರ್ತದಲ್ಲಿ ರಾಚಪ್ಪಗೌಡರ ದತ್ತಕ ಕಾರ್ಯಕ್ರಮವನ್ನು ನೆರವೇರಿಸಿದರು. ನಿರ್ಣಾ ಗ್ರಾಮದ ರಾಚಪ್ಪಗೌಡರು ಕಮಲಾಪೂರದ ಗೌಡರಾದರು.

ರಾಚಪ್ಪಗೌಡರು ಉರ್ದು ಫಾರ್ಸಿ, ಕನ್ನಡ, ಮರಾಠಿ ಹಿಂದಿ, ಮೊದಲಾದ ಭಾಷೆಗಳನ್ನು ಬಲ್ಲವರಾಗಿದ್ದರು. ನಿಜಾಮನ ರಾಜ್ಯದಲ್ಲಿ ಉತ್ತಮ ಪ್ರಜೆಗಳೆನ್ನಿಸಿಕೊಂಡ ಮನೆತನದ ರಾಚಪ್ಪ ಗೌಡರನ್ನು ಹೈದ್ರಾಬಾದ ಕರ್ನಾಟಕದ ಎಲ್ಲ ಹಿಂದೂ ಮುಸಲ್ಮಾನರು ಪ್ರೀತಿಯಿಂದ ಕಾಣುತ್ತಿದ್ದರು. ಕಾಯ್ದೆ ಕಾನೂನುಗಳನ್ನು ಚೆನ್ನಾಗಿ ತಿಳಿದುಕೊಂಡವರಾಗಿದ್ದರು. ಮನೆಯ ಹಿರಿಯಮಗ ವಂಶಪಾರಂಪರ್ಯವಾಗಿ ಬರುತ್ತಿದ್ದ ಈ ಗೌಡಕಿ, ತನಗೆ, ಮನೆಗೆ ೨ನೇ ಮಗನಾದುದರಿಂದ ಬರುತ್ತಿದ್ದಿರಲಿಲ್ಲ. ಈಗ ದತ್ತಕ ಪುತ್ರನಾಗಿ ಬಂದುದಕ್ಕೆ ಈ ಭಾಗ್ಯ ದೊರೆಯಿತೆಂದು ಸಂತೋಷಪಟ್ಟರು. ಸೋದರತ್ತೆ ವೀರಮ್ಮಗೌಡತಿ ಮತ್ತು ಸಂಗಮ್ಮ ಗೌಡತಿಯವರ ಕೃಪಾಶೀರ್ವಾದದಿಂದ ಈ ಮನೆಗೆ ಬೆಳಕಾಗಿ ಬಂದರು.

ರಾಚಪ್ಪಗೌಡರು ಹುಟ್ಟಿದ್ದು ಸುಸಂಸ್ಕೃತ ಮನೆತನದಲ್ಲಿ. ತಂದೆ ಮಡಿವಾಳಪ್ಪನವರಿಂದ ಇವರು ವಿದ್ಯೆ ಬುದ್ಧಿ ಚೆನ್ನಾಗಿ ಅರಿತುಕೊಂಡವರಾಗಿದ್ದರು. ಲೋಕವ್ಯವಹಾರದ ಜೊತೆಗೆ ಅಧ್ಯಾತ್ಮದ ಹಿರಿಮೆಯನ್ನು ಗುರುಗಳು ಕಲಿಸಿಕೊಟ್ಟಿದ್ದರು. ಬಸವಾದಿ ಶಿವಶರಣರ ಕಾಯಕ

ದಾಸೋಹ ಸಿದ್ಧಾಂತಗಳ ಮಹತಿಯನ್ನೂ ತಿಳಿದವರಾಗಿದ್ದರು. ಇವು ಜಾಗತಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ರಾಮಬಾಣದಂತಿದ್ದವು ಎಂಬುದನ್ನು ಆಗಲೇ ಮನವರಿಕೆ ಮಾಡಿಕೊಂಡವರಾಗಿದ್ದರು. ಪ್ರತಿ ದಿನವೂ ಬಸವಣ್ಣನವರ ಒಂದಾದರೂ ವಚನವನ್ನು ಓದುವ ಪರಿಪಾಠ ಇಟ್ಟುಕೊಂಡವರಾಗಿದ್ದರು. ತಮ್ಮ ಮನೆಯ ಮಂದಿಗೆಲ್ಲ ಅವುಗಳನ್ನು ಓದಿ ಹೇಳುತ್ತ ಅದರಂತೆ ನಡೆದರೆ ನಮ್ಮ ಜನ್ಮ ಪಾವನ ಎಂದೂ ಹೇಳುತ್ತಿದ್ದರು. ಕಮಲಾಪೂರದ ಸೋದರತ್ತೆ ಇದನ್ನು ಇನ್ನೂ ಬೆಳೆಸಿಕೊಳ್ಳಲು ಪ್ರೇರೇಪಿಸಿದರು. ದತ್ತಕ ತಂದೆ ತಾಯಿಗಳಿಗೆ ಹಿಡಿಸಲಾರದ ಹಿಗ್ಗಾಯಿತು. ಸಂಗಮ್ಮ ತಾಯಿಯಂತೂ ಹೆತ್ತ ಮಗನಿಗಿಂತಲೂ ಹೆಚ್ಚಿನ ಪ್ರೀತಿಯಿಂದ ಕಾಣುತ್ತಿದ್ದರು.

ಧನ್ಯರಾದ ವೀರಪ್ಪ ಗೌಡರು ಮತ್ತು ವೀರಮ್ಮ ತಾಯಿಯವರು ಸಂತೋಷದಲ್ಲಿದ್ದಾಗ ತಮ್ಮ ಜೀವನಯಾತ್ರೆ ಮುಗಿಸಿದರು. ಎಲ್ಲಭಾರವೂ ಸಂಗಮ್ಮಗೌಡತಿಯ ಮೇಲೆ ಬಿದ್ದಿತು. ಧೈರ್ಯದಿಂದ ಸತತ ಪರಿಶ್ರಮ ಪಡುತ್ತ ಮೈಯೆಲ್ಲ ಕಣ್ಣಾಗಿ ಮನೆತನದ ವ್ಯವಹಾರವನ್ನೆಲ್ಲ ಚೆನ್ನಾಗಿ ನೀಗಿಸತೊಡಗಿದರು. ರಾಚಪ್ಪ ಗೌಡರು ದತ್ತಕ ತಂದೆ ತಾಯಿಗಳನ್ನು ಕಳೆದುಕೊಂಡು ದುಃಖತಪ್ತರಾದರು. ಮಗನಿಗೆ ಯಾವುದೇ ರೀತಿಯ ವ್ಯಥೆ, ನೋವಾಗದಂತೆ ಸಂಗಮ್ಮತಾಯಿ ತುಂಬ ಎಚ್ಚರಿಕೆ ವಹಿಸತೊಡಗಿದರು. ತಾಯಿ ಮಾತನ್ನು ಮೀರದ ಮಗ ರಾಚಪ್ಪ ಗೌಡರು ಮನೆತನದ ಸರ್ವತೋಮುಖದ ಅಭಿವೃದ್ಧಿಗಾಗಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡವರಾದರು.

ತಂದೆ ವೀರಪ್ಪ ಗೌಡರ ಮರಣಾನಂತರ ನಿಜಾಮ ಸರಕಾರ ರಾಚಪ್ಪಗೌಡರನ್ನು ಕಮಲಾಪೂರದ ಪೋಲಿಸಗೌಡರನ್ನಾಗಿ ನೇಮಿಸಿತು. ಕೆಲದಿನಗಳ ನಂತರ ಅವರ ಕಾರ್ಯವೈಖರಿಯನ್ನು ಮೆಚ್ಚಿಕೊಂಡು ಅವರನ್ನು ನ್ಯಾಯಾಧೀಶರನ್ನಾಗಿ (ಚಾರುಮ್ ದರ್ಜಾ ಮುನ್ನುಪ್ಪೆ) ನೇಮಿಸಿತು. ಇಂಥವರು ನನ್ನ ಮಗ ಆದದ್ದು ನನ್ನಭಾಗ್ಯ ಎಂದು ಸಂತೋಷದಲ್ಲಿ ಬೀಗಿದರು. ಮಗನ ಈ ಭಾಗ್ಯ ಕಾಣುವ ಅದೃಷ್ಟ ತನ್ನ ಯಜಮಾನರಿಗೆ ಮತ್ತು ಅಕ್ಕ ಅವರಿಗಿಲ್ಲದಾಯಿತು ಎಂದು ಮನದಲ್ಲಿಯೆ ಮರುಕಪಟ್ಟುಕೊಂಡರು. ಕಣ್ಣು ಒರೆಸಿಕೊಳ್ಳುತ್ತ ತಮಗಾವ ದುಃಖವೂ ಇಲ್ಲ ಎನ್ನುವಂತೆ ತಾಯಿ ಸಂಗಮ್ಮಗೌಡತಿ ರಾಚಪ್ಪಗೌಡರನ್ನು ನಗುನಗುತ್ತಲೆ ಪ್ರೀತಿಪೂರ್ವಕ ನೋಡಿಕೊಳ್ಳತೊಡಗಿದರು. ಇವರ ಮಾರ್ಗ ದರ್ಶನದಲ್ಲಿ ರಾಚಪ್ಪಗೌಡರು ಸತ್‌ಪಥದತ್ತ ನಡೆಯುವಂತಾಯಿತು. ತಪ್ಪು ಮಾಡುವವರನ್ನು ಕಂಡರೆ ಗೌಡರು ಸಿಡಿದೇಳುತ್ತಿದ್ದರು. ಜನ ಗೌಡರಿಗೆ ಹೆದರುತ್ತಿದ್ದರು. ದುಷ್ಟನಿಗ್ರಹ ಶಿಷ್ಟ ಪರಿಪಾಲನಾ ಸೂತ್ರ ಇವರದಾಗಿತ್ತು.

ಮನೆಗೆದ್ದು ಮಾರುಗೆದೆಯುವ ಧ್ಯೇಯ ರಾಚಪ್ಪ ಗೌಡರದಾಗಿತ್ತು. ತಮ್ಮ ಹೊಲಮನೆ, ಬಟ್ಟೆ ವ್ಯಾಪಾರ ನೋಡಿಕೊಳ್ಳುತ್ತಲಿದ್ದರು. ಜೊತೆಗೆ ಗೌಡಕಿ ಕೆಲಸ.

**ತಾಯಿ ಬಸಮ್ಮ :**

ತಾಯಿ ಸಂಗಮ್ಮ ಗೌಡತಿ ಮಗನ ಲಗ್ನ ಮಾಡಲು ಯೋಚಿಸತೊಡಗಿದರು,. ಊರ ಗುರು ಹಿರಿಯರ ಮುಂದೆ ಈ ವಿಷಯ ಪ್ರಸ್ತಾಪಿಸಿದರು. ಯೋಗ್ಯಮನೆತನದ ಕನ್ಯಾನೋಡಲು ವಿನಂತಿಸಿಕೊಂಡರು. ಒಂದುದಿನ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಧನ್ನೂರಗ್ರಾಮದ ಸುಸಂಸ್ಕೃತ ಶ್ರೀಮಂತ ಮನೆತನದ ಗುರುಲಿಂಗಪ್ಪ ಸಾಹುಕಾರರ ಮಗಳು ಬಸಮ್ಮ ಅರೊಂದಿಗೆ ಲಗ್ನ ಮಾಡಿದರು.

**ತಂದೆ ತ`ಯಿಗಳು :**

ರಾಚಪ್ಪಗೌಡರು–ಬಸಮ್ಮ ತಾಯಿ ಸತಿಪತಿಗಳೊಂದಾಗಿ ಸಂಸಾರದಲ್ಲಿ ಕಾಲಿಟ್ಟರು. ಇಬ್ಬರೂ ತಾಯಿ ಸಂಗಮ್ಮ ಗೌಡತಿಯನ್ನು ತಮ್ಮ ಪಾಲಿನ ದೇವರೆಂದೇ ಗೌರವಿಸತೊಡಗಿದರು. ಬಸಮ್ಮ ಅತ್ತೆಯುವರ ಮಾತನ್ನು ಚಾಚೂತಪ್ಪದೆ ಕೇಳುತ್ತ ಮನೆಯ ಗೃಹಲಕ್ಷ್ಮಿಯಾಗಿ ಬೆಳೆಯತೊಡಗಿದರು. ಇವರ ಭಕ್ತಿ ಭಾವಕ್ಕೆ ಶಿವಕರುಣಿಸಿದನು. ಬಸಮ್ಮ ಗರ್ಭಿಣಿಯಾದರು. ಎಲ್ಲರಿಗೂ ಅತೀವ ಸಂತೋಷವಾಯಿತು. ಬಸಮ್ಮ ಹೆಣ್ಣು ಮಗುವಿಗೆ ಜನ್ಮ ನೀಡಿದರು. ಕಾಶಿಬಾಯಿ ಎಂದು ಹೆಸರಿಟ್ಟರು. ಕೆಲವರುಷಗಳಾದ ಮೇಲೆ ಮತ್ತೆ ಒಂದು ಹೆಣ್ಣು ಮಗುವಿಗೆ ಜನ್ಮನೀಡಿದರು ಆ ಕೂಸಿಗೆ ಗಂಗಮ್ಮ ಎಂದು ಹೆಸರಿಟ್ಟರು.

ಕಷ್ಟಪಟ್ಟರೆ ಸುಖವಾಗುವುದು. ಇದು ಲೋಕಾರೂಢಿಯ ಮಾತು. ಅದೂ ಸ್ವಲ್ಪ ಸುಖಕ್ಕಾಗಿ ಬಹಳಷ್ಟು ಕಷ್ಟಪಡಬೇಕಾಗುತ್ತದೆ. ಅದನ್ನೇ ಅಲ್ಲಮ ಪ್ರಭದೇವರು ಸಾಸಿವೆ ಕಾಳಿನಷ್ಟು ಸುಖಪಡುವುದಕ್ಕೆ ಸಮುದ್ರದಷ್ಟು ದುಃಖ ಪಡಬೇಕಾಗುತ್ತದೆಂಬುದನ್ನು ತಮ್ಮದೊಂದು ವಚನದಲ್ಲಿ ಮಾರ್ಮಿಕವಾಗಿ ನುಡಿದಿರುವುದನ್ನು ರಾಚಪ್ಪಗೌಡರು ಮನುಷ್ಯತ್ವವನ್ನು ಮಾರಿಕೊಂಡು, ಅನ್ಯಾಯದಿಂದ ದುಡ್ಡುಗಳಿಸಿದರೆ ಅದು ಶಿವನಿಗೆ ಸಮ್ಮತಿಯಾಗದೆಂಬ ಮಾತನ್ನು ಅರ್ಥಪೂರ್ಣವಾಗಿ ವಿವರಪಡಿಸಿರುವದನ್ನು 'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ' ಎಂಬ ವಚನದಲ್ಲಿ ಮನಗಾಣಬಹುದು.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ.

**– ಬಸವಣ್ಣನವರು**

## ಶಂಕರಶೆಟ್ಟಿ ಪಾಟೀಲರ ಜನನ:

ಇಬ್ಬರು ಹೆಣ್ಣುಮಕ್ಕಳ ತಾಯಿಯಾದ ಬಸಮ್ಮ ಗೌಡತಿಯುವರು ಮತ್ತೆ ಗರ್ಭಧರಿಸಿದರು. ಬಹುದಿವಸಗಳ ಬಯಕೆ ಈಡೇರಿತು. ಬಸಮ್ಮಗೌಡತಿಯವರು ದಿ.೧೪ ಏಪ್ರಿಲ್ ೧೯೧೭ರಂದು ಗಂಡುಮಗುವಿಗೆ ಜನ್ಮ ನೀಡಿದರು. ಊರಿಗೆ ಊರೇ ಸಂಭ್ರಮದಲ್ಲಿ ತೇಲಾಡಿತು. ಈ ಹುಟ್ಟಿದ ಮಗುವಿಗೆ ಶಂಕರ ಶೆಟ್ಟಿ ಎಂದು ನಾಮಕರಣ ಮಾಡಿ ಜೋಗುಳಹಾಡಿದರು. 'ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು' ಎಂದು ಹಾಡಿಯೇ ಹಾಡಿದರು.

## ಶಂಕರಶೆಟ್ಟಿ ಅವರ ಬಾಲ್ಯ :

ಶಂಕರ ಶೆಟ್ಟಿಯವರು ಎತ್ತಿಕೊಂಡವರ ಕೂಸಾಗಿ ದಿನದಿನಕ್ಕೆ ಬೆಳೆಯತೊಡಗಿದರು. ಇವರದು ಒಕ್ಕಲುತನ  ಮನೆತನ, ಮೂರು ನೂರಕ್ಕೂ ಹೆಚ್ಚಿನ ಭೂಮಿಸೀಮಿ, ಹತ್ತಿಪ್ಪತ್ತು ಜೋಡಿ ಎತ್ತುಗಳು. ಮನೆತುಂಬ ನೂರಾರು ದನಕರುಗಳು, ತೋಟಪಟ್ಟಿಯಿಂದ ಸಮೃದ್ಧ ಒಕ್ಕಲುತನ. ಶಂಕರಶೆಟ್ಟಿ ಗೌಡರ ಮಗನಾಗಿ, ಆಳುಮಕ್ಕಳೊಂದಿಗೆ, ಸಾಯಂಕಾಲ ಆಗಾಗ ಹೊಲಕ್ಕೆ ಹೋಗಿ ಬರುತ್ತಿದ್ದರು. ಮಾವಿನ ಗಿಡದಲ್ಲಿರುವ ಮಿಡಿಗಳಿಗೆ ಕಲ್ಲುಬಿಗಿದು ಬಿದ್ದ ಮಿಡಿ ಕಾಯಿಗಳ ರುಚಿ ನೋಡುತ್ತಿದ್ದರು. ಬಾಗಿದ ಬಾಳೆಗಿಡ ಮುಟ್ಟಿ ತಟ್ಟಿ ಹಣ್ಣಿನ ರುಚಿ ಸವಿಯುತ್ತಿದ್ದರು. ಓರಿಗೆಯ ಗೆಳೆಯರೊಂದಿಗೆ ಓಣಿತುಂಬ ಓಡಾಡುತ್ತ ಗೋಲಿ ಗುಂಡು ಆಡುತ್ತಿದ್ದರು. ತಂದೆಯವರ ಕಣ್ಣರಿಕೆಯಲ್ಲಿ ಬಾವಿಯಲ್ಲಿ ಈಜಾಡುತ್ತಿದ್ದರು. ಕುದುರೆ ಹತ್ತುವುದನ್ನೂ ಕಲಿತುಕೊಂಡರು. ಆರೋಗ್ಯವೆ ಭಾಗ್ಯ ಎಂದಂದು ತಂದೆ–ತಾಯಿಗಳು ಹಾಲು ಕುಡಿಯಲು ಮತ್ತು ಹಣ್ಣು ಹಂಪಲ ತಿನ್ನಲು ಕೊಡುತ್ತಿದ್ದರು. ಹಾಯಾಗಿ ಬೆಳೆದರು. ಅಜ್ಜಿ ಸಂಗವ್ವ ಗೌಡತಿ, ತಾಯಿ ಮಗನ ಯೋಗಕ್ಷೇಮವನ್ನಂತೂ ಕಣ್ಣಲ್ಲಿ  ಕಣ್ಣಿಟ್ಟು ನೋಡುತ್ತಲಿದ್ದರು.

## ಶಂಕರಶೆಟ್ಟಿ ಅವರ ವಿದ್ಯಾಭ್ಯಾಸ:

ರಾಚಪ್ಪಗೌಡರು ವಿದ್ಯಾಪ್ರೇಮಿಗಳು, ಮಗ ಶಂಕರಶೆಟ್ಟಿಯವರನ್ನು ಶಾಲೆಗೆ ಹಾಕಿದರು. ಆಗ ನಿಜಾಮನ ರಾಜ್ಯವಿತ್ತು. ಉರ್ದು ಮಾಧ್ಯಮ ಶಾಲೆಗೆ ಕಳಿಸಬೇಕಾಗಿತ್ತು. ಕಮಲಾಪೂರದ ಶಾಲೆಗೆ ಹಾಕಿದರು. ಶಿಕ್ಷಕರು ಹೇಳಿದಂತೆ ಮನೆಯ ಪಾಠಗಳನ್ನು ಚೆನ್ನಾಗಿ ಮಾಡುತ್ತಿದ್ದರು.

ತಿಳಿಯದ ವಿಷಯಗಳನ್ನು ಮತ್ತೆ ಮತ್ತೆ ಗುರುಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಸೂಟಿಯ ದಿನಗಳಲ್ಲಿ ತಂದೆಯವರೊಂದಿಗೆ ಕುದುರೆಯ ಮೇಲೆ ಕುಳಿತು ಆವೂರು ಈ ಊರು ಮತ್ತು ನೆಂಟರಿಷ್ಟರ ಮನೆಗಳಿಗೂ ಹೋಗಿ ಬರುತ್ತಿದ್ದರು. ಓದುವುದರಲ್ಲಿಯೂ ವರ್ಗಕ್ಕೆ ಪ್ರಥಮರಾಗಿದ್ದರು. ಹೀಗೆ ತೈತಾನಿಯಾ (೩ನೇ ವರ್ಗ) ಪಾಸಾದರು.

ಕಮಲಾಪೂರದಲ್ಲಿ ೪ನೇ ವರ್ಗದವರೆಗೆ ಮಾತ್ರ ಶಾಲೆಯಿತ್ತು. ಮುಂದೆ ಓದಲು ಶ್ರೀ ಶಂಕರ ಶೆಟ್ಟಿಯವರನ್ನು ರಾಚಪ್ಪಗೌಡರು ಇವರನ್ನು ಗುಲಬರ್ಗಾಕ್ಕೆ ಕಳುಹಿಸಿಕೊಟ್ಟರು. ಇಲ್ಲಿ ಐದನೇ ತರಗತಿಯಲ್ಲಿ ಓದುತ್ತಿದ್ದಾಗ ಪ್ಲೇಗಬೇನೆ ಹಬ್ಬಿತು. ತಂದೆಯವರ ಆದೇಶದಂತೆ ಶಂಕರಶೆಟ್ಟರು ಗುಲಬರ್ಗಾ ಬಿಟ್ಟು ಬೀದರಕ್ಕೆ ಶಾಲೆಗೆ ಹೋದರು. ಬೀದರದಲ್ಲಿ ೫ನೇ ಈಯತ್ತೆ ಪಾಸಾಗಿ ೬ನೇ ಈಯತ್ತೆಗೆ ಮತ್ತೆ ಗುಲಬರ್ಗಾಕ್ಕೆ ಬಂದರು. ಚೆನ್ನಾಗಿ ಅಭ್ಯಾಸಮಾಡಿ ೬ನೇ ವರ್ಗ ಪಾಸಾದರು. ಮತ್ತೆ ಮುಂದಿನ ಅಭ್ಯಾಸಕ್ಕಾಗಿ ಕಮಲಾಪೂರದಲ್ಲಿ ಶಿಕ್ಷಕರಾಗಿದ್ದ ಕರಬಸಪ್ಪ ಅವರು ರಾಯಚೂರಿಗೆ ಕರೆದುಕೊಂಡು ಹೋದರು. ಅವರಿಗೆ ರಾಯಚೂರಿಗೆ ವರ್ಗವಾಗಿತ್ತು. ಉರ್ದುವಿನ ಜೊತೆಗೆ ಪಾರ್ಸಿ, ಹಿಂದಿ, ಕನ್ನಡ, ಮರಾಠಿ ಭಾಷೆಗಳನ್ನು ಕಲಿತುಕೊಂಡರು. ಅವರ ತೋಟಕ್ಕೆ ಸಾಯಂಕಾಲವಾದ ಮೇಲೆ ಈಜಲೂ ಹೋಗುತಿದ್ದರು. ಅಂತೂ ಈ ಕರಬಸಪ್ಪ ಗುರುಗಳ ಮಾರ್ಗದರ್ಶನದಲ್ಲಿ ೭ನೇ ಈಯತ್ತೆಯನ್ನು (ವಸ್ತಾನಿಯ)ಪಾಸಾದರು. ರಾಯಚೂರಿನಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು. ಆಗ ಅಜ್ಜಿ ಸಂಗಮ ಗೌಡತಿಯವರ ಇಚ್ಛೆಯಂತೆ ಮೊಮ್ಮಗ ಶಂಕರ ಶೆಟ್ಟರನ್ನು ಮತ್ತೆ ಓದಲೆಂದು ಗುಲಬರ್ಗಾಕ್ಕೆ ಕರೆತಂದರು. ನೂತನ ವಿದ್ಯಾಲಯದಲ್ಲಿ ೮ನೇ ವರ್ಗಕ್ಕೆ ಪ್ರವೇಶ ದೊರೆಯಿತು. ಪ್ರತಿನಿತ್ಯವೂ ಕಮಲಾಪೂರದಿಂದ ಸಾಯಕಲ್ ಮೇಲೆ ಬಂದೂ ಹೋಗಿ ಮಾಡುತ್ತಲಿದ್ದರು. ಆಗ ಶ್ರೀಶಂಕರ ಶೆಟ್ಟಿಯವರ ವಯಸ್ಸು ಕೇವಲ ಹದಿನಾಲ್ಕು ಮಾತ್ರ, ಶಿಕ್ಷಕರಾದ ಪ್ರಭುರಾವ್ ಮತ್ತು ರಾಚಯ್ಯ ಸ್ವಾಮಿ ಶಿಕ್ಷಕರು ಶಂಕರಶೆಟ್ಟರಿಗೆ ........ಐಚ್ಛಿಕ ಭಾಷೆಯೆಂದು ಫಾರ್ಸಿ ಬದಲಾಗಿ ಕನ್ನಡ ತೆಗೆದುಕೊಳ್ಳಲು ಸಲಹೆ ಮಾಡಿದರು. ಕನ್ನಡಾಭಿಮಾನಿ ಶ್ರೀಶಂಕರಶೆಟ್ಟರು ತಕ್ಷಣ ಕನ್ನಡವನ್ನೇ .ಐಚ್ಛಿಕ ಭಾಷೆಯನ್ನಾಗಿ ಕಲಿಯತೊಡಗಿದರು.

ಶಂಕರಶೆಟ್ಟರು ಉರ್ದು, ಫಾರ್ಸಿ ಭಾಷೆಗಳನ್ನು ಚೆನ್ನಾಗಿ ಮಾತನಾಡುತ್ತಿದ್ದರು. ಯಾರೇ ಉರ್ದುವಿನಲ್ಲಿ ಪ್ರಶ್ನೆ ಕೇಳಿದರೂ ತಕ್ಷಣ ಅವರಿಗೆ ಉತ್ತರ ಕೊಡುತ್ತಿದ್ದರು. ಒಮ್ಮೆ ಶಾಲೆಗೆ ಬಂದ ತಪಾಷಣಾಧಿಕಾರಿಗಳಿಗೆ ಉರ್ದುವಿನಲ್ಲಿ ಕೇಳಿದ ಪ್ರಶ್ನೆಗೆ ಉತ್ತರ ಹೇಳಿದ ಶಂಕರಶೆಟ್ಟಿಯವರ ಜಾಣ್ಮೆಯನ್ನು ಕೊಂಡಾಡಿದರಂತೆ. ಶಂಕರಶೆಟ್ಟಿ ಪಾಟೀಲರ ಅಭ್ಯಾಸ ಸಂಗಮ ಅಜ್ಜಿಯ ಇಚ್ಛೆಯಂತೆ ಗುಲಬರ್ಗಾದಲ್ಲಿ ಮುಂದುವರಿಯಿತು.

ರಾಚಪ್ಪಗೌಡರು ವಯಸ್ಸಿಗೆ ಬಂದ ಹಿರಿಯ ಮಗಳಾದ ಕಾಶಿಬಾಯಿಯವರನ್ನು ಹುಮನಾಬಾದ ಗೌಡರ ಮನೆಗೆ ಲಗ್ನ ಮಾಡಿಕೊಟ್ಟರು. ಬಸಮ್ಮ ಗೌಡತಿ ಯವರು ಶಿವಲಿಂಗಪ್ಪಗೌಡರಿಗೆ ಜನ್ಮ ನೀಡಿ ಎರಡು ವರುಷಗಳು ಗತಿಸಿದ್ದು ಮೊಮ್ಮಗ ಶಂಕರಶೆಟ್ಟಿ ಓದುವದನ್ನು ಮುಗಿಸಿಯಾದ ಮೇಲೆ ಮನೆಗೆ ಕರೆತರಲು ಯೋಚಿಸುತ್ತಲಿದ್ದರು. ತಾವೇ ಮನೆತನದ ಎಲ್ಲ ಜವಾಬ್ದಾರಿಯನ್ನು ಹೊತ್ತುಕೊಂಡು ಹೋಗುತ್ತಲಿದ್ದರು. ರಾಚಪ್ಪಗೌಡರು ಕಮಲಾಪೂರದ ಸುತ್ತಮುತ್ತಲಿನ ಹಳ್ಳಿಗಳಿಗೆಲ್ಲ ದೊರೆಗಳಂತಿದ್ದರು, ನ್ಯಾಯ ನಿಷ್ಠುರರಾಗಿದ್ದರು. ಯಾರೂ ಅವರ ಮಾತನ್ನು ಮೀರುತ್ತಿರಲಿಲ್ಲ. ಅಷ್ಟೇ ಗೌಡರನ್ನು ಗೌರವ ಭಾವದಿಂದ ಕಾಣುತ್ತಲಿದ್ದರು.

**ತಂದೆಯವರ ನಿಧನ :**

ತಾನೊಂದು ಬಗೆದರೆ ದೈವ ಇನ್ನೊಂದು ಬಗೆಯಿತು. ಇದ್ದಕ್ಕಿದ್ದಂತೆ ರಾಚಪ್ಪಗೌಡರು ದಿ.೨೧-೮-೧೯೨೯ರಂದು ಲಿಂಗೈಕ್ಯರಾದರು. ಮಗನನ್ನು ಕಳೆದುಕೊಂಡ ಸಂಗಮ್ಮಗೌಡತಿ ಗಂಡನನ್ನು ಕಳೆದುಕೊಂಡ ಬಸಮ್ಮ ತಾಯಿ ಹಾಗೂ ಲಗ್ನವಾಗಿ ಗಂಡನ ಮನೆ ಸೇರಿದ್ದ ಕಾಶಿಬಾಯಿ, ಮಗ ಶಂಕರ ಶೆಟ್ಟಿ ಹಾಗೂ ಆಳು ಮನುಷ್ಯರು ಗೌಡರನ್ನು ಕಳೆದುಕೊಂಡು ಗೊಳೊ ಎಂದು ಅಳತೊಡಗಿದರು. ಊರಿಗೆ ಊರೇ ಕಣ್ಣೀರು ಸುರಿಸಿತು. ತಮ್ಮ ಉದಾತ್ತ ಚರಿತ್ರೆಯಿಂದ, ಕಾಯಕ ನಿಷ್ಠೆಯಿಂದ ಜನ ಮನ ಗೆದ್ದುಕೊಂಡಿದ್ದ ರಾಚಪ್ಪಗೌಡರು ಈ ಭಾಗದ ಜನತೆಯ ಕಲ್ಯಾಣ ಬಯಸಿದವರಾಗಿದ್ದರು. ಅವರ ನಿಧನದಿಂದ ಈ ಭಾಗ ದೇವರಿಲ್ಲದ ದೇವಾಲಯದಂತಾಯ್ತೆಂದು ಶೋಕತಪ್ತರಾದರು. ವಿಧಿಯ ಕೈವಾಡ, ಅವರ ಆಯುಷ್ಯ ಅಷ್ಟೇ ಇತ್ತು. ಮಾಡುವುದಾದರೂ ಏನು, ದೈವೇಚ್ಛೆ. ಹೋದವರ ಬಯಕೆಯನ್ನು ಇದ್ದವರು ತೀರಿಸುವುದೇ ಧರ್ಮ ಎಂದು ಅತ್ತು ಅತ್ತು ಶೋಕತಪ್ತರಾದರು. ಎಲ್ಲೆಲ್ಲೂ ಮೌನ ಆವರಿಸಿತು. ಆಪ್ತರು, ಸ್ನೇಹಿತರು ಎಲ್ಲರೂ ಅಂತ್ಯ ಸಂಸ್ಕಾರದಲ್ಲಿ ಪಾಲ್ಗೊಂಡರು. ಸಂಗಮ್ಮ ಗೌಡತಿಯವರಿಗೂ ಶಂಕರ ಶೆಟ್ಟಿಯವರಿಗೂ ಸಾಂತ್ವನ ಹೇಳುತ್ತ ಮೃತರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನೀಯಲೆಂದು ಪ್ರಾರ್ಥಿಸಿ, ಶ್ರೀಶಂಕರ ಶೆಟ್ಟರನ್ನು ಕರೆತಂದು, ಗಾದಿಯ ಮೇಲೆ ಕೂಡ್ರಿಸಿ ಆಶೀರ್ವದಿಸಿ ಹೋದರು.

## ಮದುವೆ :

ಅಜ್ಜಿ ಸಂಗಮ್ಮ ಗೌಡತಿಯವರು ಚಾಣಾಕ್ಷಮತಿಗಳಾಗಿದ್ದರು. ಮೊಮ್ಮಗನ ಮದುವೆ ಮಾಡಬೇಕೆಂದು ಯೋಚಿಸತೊಡಗಿದರು. ಮನೆಯ ಗುರುಗಳನ್ನು ಕೇಳಿ ನೋಡಿದರು. ಅವರ ಸಮ್ಮತಿ ಪಡೆದು ಮೊಮ್ಮಗ ಶಂಕರಶೆಟ್ಟಿ ಅವರಿಗೆ ಕನ್ಯಾ ಶೋಧಕ್ಕೆ ತೊಡಗಿದರು. ಹೋದಲ್ಲೆಲ್ಲ ಆ ದೃಷ್ಟಿಯಿಂದ ಹುಡುಗಿಯರನ್ನು ಕಂಡು, ಅಜ್ಜಿ ಸಲುಗೆಯಿಂದ ಮಾತನಾಡಿಸುತ್ತಿದ್ದರು. ಹೀಗೆಯೆ ಒಂದು ದಿನ ಹಳೆಯ ತಮ್ಮ ಸಂಬಂಧಿಕರೊಬ್ಬರ ಮನೆಗೆ ಹೋಗಿದ್ದರು.ರಂಗಮ್ಮ ಹೆಸರಿನ ಹುಡುಗಿಯನ್ನು ಕಂಡು ಮನದಲ್ಲಿಯೆ ಮೆಚ್ಚಿಕೊಂಡು ಮನೆಯಲ್ಲಿಯೂ ಚರ್ಚಿಸಿದರು. ಗುರುಹಿರಿಯರ ಜೊತೆಗೆ ಪದ್ಧತಿ ಪ್ರಕಾರ ಹೆಣ್ಣಿನವರ ಮನೆಗೆ ಹೋಗಿ ಕನ್ಯಾ ಉಡಿತುಂಬಿ ಬಂದರು. ಎಲ್ಲರೂ ಕನ್ಯಾ ಪಾಸುಮಾಡಿದರು. ಅವರೂ ಕೊಡಲು ಒಪ್ಪಿದರು. ಅವರು ಮತ್ಯಾರೊ ಆಗಿರದೆ, ತಾಯಿ ಬಸಮ್ಮ ಗೌಡತಿಯ ಅಣ್ಣನ ಮಗಳೇ ಆಗಿದ್ದಳು. ಧನ್ನೂರಿನ ಮುರಿಗೆಪ್ಪ ಸಾಹುಕಾರರ ಮಗಳು ರಂಗಮ್ಮ ಅವರೊಂದಿಗೆ ಶಂಕರಶೆಟ್ಟಿ ಅವರ ಲಗ್ನವಾಯಿತು.

ಗಂಗಮ್ಮ ಅವರನ್ನು ಬೀದರ ಜಿಲ್ಲೆಯ ರಂಜೋಳ ಖೇಣಿ ಮನೆಗೆ ಕೊಟ್ಟು ಲಗ್ನ ಮಾಡಿದ್ದರು. ಈಗ ಶಿವಲಿಂಗಪ್ಪ ಚಿಕ್ಕವರು, ಶಂಕರಶೆಟ್ಟಿಯವರು ತಂದೆಯ ಸ್ಥಾನದಲ್ಲಿ ನಿಂತು ಜೋಪಾನ ಮಾಡಿದರು. ಶಾಲೆಗೆ ಕಳಿಸಿದರು. ತಮ್ಮ ಶಿವಲಿಂಗಪ್ಪ ಎಲ್.ಎಲ್.ಬಿ. ಪದವೀಧರರಾಗುವವರೆಗೆ ಓದಿಸಿದರು. ನವಕರಿ ಹತ್ತಿತು, ಕಾಯ್ದೆಯ ಜ್ಞಾನ ಪಡೆದುಕೊಂಡವರಾದರು. ನಿರ್ಣಾ ಗ್ರಾಮದ ದೊಡ್ಡಪ್ಪನವರಾದ ಚನ್ನಪ್ಪಗೌಡ ಮತ್ತು ರತ್ನಮ್ಮ ದಂಪತಿಗಳಿಗೆ ಮಕ್ಕಳಾಗಿದ್ದಿರಲಿಲ್ಲ. ಅವರು ಶಿವಲಿಂಗಪ್ಪ ಗೌಡರನ್ನು ದತ್ತಕ ಪಡೆದರು. ನಿರ್ಣಾ ಗ್ರಾಮಕ್ಕೆ ಹೋದರು.

ಸಂಗಮ್ಮ ಗೌಡತಿಯವರು ಶ್ರಾವಣಮಾಸದಲ್ಲಿ ಪ್ರತಿದಿನವೂ ಒಂದು ತಿಂಗಳ ಪರ್ಯಂತ ಊರಮಠಕ್ಕೆ ಪುರಾಣ ಕೇಳಲು ಹೋಗುತ್ತಿದರು. ಅಲ್ಲಿ ಶಾಸ್ತ್ರಿಗಳು ಬಸವ ಪುರಾಣ ಹೇಳುತ್ತಿದ್ದರು. ಸಂಗಮ್ಮ ಜೊತೆಗೆ ಮೊಮ್ಮಗ ಶಂಕರ ಶೆಟ್ಟರನ್ನೂ ಕರೆದುಕೊಂಡು ಹೋಗುತ್ತಿದ್ದರು. ಅವರ ಮನಸ್ಸಿನ ಮೇಲೆ ಶಾಸ್ತ್ರಿಗಳು ಹಾಡುತ್ತಿದ್ದ ಬಸವಣ್ಣನವರ ಒಂದು ವಚನದ ಪ್ರಭಾವ ಬಹಳಷ್ಟಾಗಿತ್ತು. ಶಂಕರ ಶೆಟ್ಟರಿಗೆ ಈ ಕಳಬೇಡ, ಕೊಲಬೇಡ ಎಂಬ ವಚನವನ್ನು ಕಂಠಪಾಠ ಮಾಡಲು ಅಜ್ಜಿ ಹೇಳುತ್ತಿದ್ದಳು. ಮತ್ತು ಅದರ ಅರ್ಥವನ್ನು ತಮಗೆ ಹೊಳೆದಂತೆ ಹೇಳುತ್ತಲಿದ್ದರು. ಬರೀ ಹೇಳುವುದಷ್ಟೇ ಅಲ್ಲ. ಅದರಂತೆ ನಡೆಯಲೂ ಹೇಳುತ್ತಿದ್ದರು. ಇದನ್ನು ನಿತ್ಯವೂ ಲಿಂಗಪೂಜೆ ಮಾಡಿಕೊಳ್ಳುವಾಗ ಪ್ರಾರ್ಥನಾರೂಪದಲ್ಲಿ

ಸಂಗಮ್ಮ ಅಜ್ಜಿ ಹಾಡುತ್ತಿದ್ದರು. ಮಗ ಶಂಕರ ಶೆಟ್ಟರೂ ಜೊತೆಗೆ ಹಾಡುತ್ತಿದ್ದರು. ಶಾಸ್ತ್ರಿಗಳು ಮಠದಲ್ಲಿ ಬಸವಣ್ಣನವರ ಘನವ್ಯಕ್ತಿತ್ವ ಕುರಿತು ಮನಮುಟ್ಟವಂತೆ ಹೇಳುತ್ತಿದ್ದರು. ಇದನ್ನು ಕೇಳುತ್ತಿದ್ದ ಶಂಕರಶೆಟ್ಟರ ಮೈ ರೋಮಾಂಚನಗೊಳ್ಳುತ್ತಿತ್ತು. ಆ ಸಂಸ್ಕಾರ ಬಲವೇ ಶಂಕರಶೆಟ್ಟರ ಚಾರಿತ್ರ್ಯ ಶುದ್ಧಿಗೆ ದಾರಿದೀಪವಾಗಿರುವಂಥದ್ದು.

ಶಂಕರಶೆಟ್ಟಿ ಪಾಟೀಲರಿಗೆ ಈ ರಂಗಮ್ಮ ಗೌಡತಿ ಅವರು ಸತಿಯಾಗಿ ಕೈಹಿಡಿದರು. ಇವರ ತವರುಮನೆ ಧನ್ನೂರ ಗ್ರಾಮ. ಇಲ್ಲಿಯ ಸುಸಂಸ್ಕೃತ ಶ್ರೀಮಂತ ಮನೆತನದ ಮುರಗೆಪ್ಪ ಸಾಹು ಮತ್ತು ಗುಂಡಮ್ಮ ದಂಪತಿಗಳ ಸುಪುತ್ರಿಯೆ ಈ ರಂಗಮ್ಮ ಗೌಡತಿಯವರು. ಇವರಿಗೆ ಎಳ್ಳಷ್ಟೂ ಅಹಮಿಕೆಯೆಂಬುದು ಇದ್ದಿರಲಿಲ್ಲ. ಮನೆಗೆ ಬರಹೋಗುವ ಅತಿಥಿ ಅಭ್ಯಾಗತರನ್ನು ದೇವರೆಂಬ ಭಾವನೆಯಿಂದ ಸತ್ಕರಿಸುವ ವಿಶಾಲ ಮನೋಬಲದವರಿವರಾಗಿದ್ದರು. ಕಮಲಾಪೂರ ಪೋಲಿಸ ಪಾಟೀಲರಾದ ಶ್ರೀ ಶಂಕರ ಶೆಟ್ಟಿ ಪಾಟೀಲರಿಗೆ ಉತ್ತಮ ಸತಿಯಾಗಿ ಪತಿಯೆ ಪರದೈವವೆಂದು ನಂಬಿ ಅವರ ಮತ್ತು ಅತ್ತೆ ಮಾವಂದಿರರ ಸೇವೆಯನ್ನು ಮನಸಾರೆ ಮಾಡುತ್ತಲಿದ್ದರು. ಮನೆ ದಾಸೋಹದ ಮಹಾಮನೆಯೆನಿಸಿತು. ಶ್ರೀಶಂಕರ ಶೆಟ್ಟರು ತಮ್ಮ ಗೌಡಕಿ ವೃತ್ತಿಯ ಜೊತೆಗೆ ಸಾಮಾಜಿಕ ಕೆಲಸ ಕಾರ್ಯಗಳನ್ನೂ ನೋಡಿಕೊಳ್ಳುತ್ತಲಿದ್ದರು. ಹೀಗಾಗಿ ಶಂಕರಶೆಟ್ಟರಿಗೆ ಹೊಲ ಮನೆಯ ಕೆಲಸ ಕಾರ್ಯಗಳತ್ತ ಗಮನ ಹರಿಸಲು ಆಗುತ್ತಿರಲಿಲ್ಲ. ಆ ಭಾರವನ್ನೂ ರಂಗಮ್ಮ ಗೌಡತಿಯವರೇ ನೋಡಿಕೊಳ್ಳತೊಡಗಿದರು. ಅತ್ತೆಯವರೊಂದಿಗೆ ರಂಗಮ್ಮ ಗೌಡತಿ ಹೊಲ ಮನೆಯ ಸಂಪೂರ್ಣ ಜವಾಬ್ದಾರಿ ಹೊತ್ತುಕೊಂಡು ಗೌಡರು ಸಮಾಜ ಸೇವೆ ಕೈಕೊಳ್ಳುವಂತೆ ಹೆಚ್ಚಿನ ಅನುವು ಮಾಡಿಕೊಟ್ಟರು. ಆಗ ಗೌಡರು ಸಮಾಜಸೇವೆಗೆ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಳ್ಳುವಂತಾಯಿತು.

ಕಾಯಕವೆಂಬುದು ಬರಿಯ ಪುರುಷರಿಗೆ ಮಾತ್ರ ಸಂಬಂಧ ಪಟ್ಟದ್ದಲ್ಲ. ಅದು ಸ್ತ್ರೀಯರಿಗೂ ಸಂಬಂಧಿಸಿದುದು. ರಂಗಮ್ಮ ಗೌಡತಿಯವರು ಮನೆಯ ಕೆಲಸಕಾರ್ಯಗಳನ್ನು ಬೆಳಗು ಹರಿಯುವುದರೊಳಗಾಗಿ ಲಗು-ಬಗೆಯಿಂದ ಮುಗಿಸಿಕೊಂಡು, ಅತ್ತೆಯವರ ಅಪ್ಪಣೆಪಡೆದು ಹೊಲದ ಕೆಲಸ ಕಾರ್ಯಗಳ ದೇಖರೇಖಿ ನೋಡುತ್ತಲಿದ್ದರು. ಗೌಡತಿಯವರು ತಪ್ಪದಲೆ ಬರುತ್ತಾರೆಂದು ಆಳುಮನುಷ್ಯರು ತಮ್ಮ ತಮ್ಮ ಕಾರ್ಯಗಳನ್ನು ಚೊಕ್ಕಟತನದಿಂದ ನಡೆಸಿಕೊಂಡು ಹೋಗುತ್ತಲಿದ್ದರು. ಮನೆಗೆ ಊಟದ ಹೊತ್ತಿಗೆ ಅತಿಥಿಗಳು ಬರುತ್ತಾರೆಂದುಕೊಂಡು ಅವರ ಆದರಾತಿಥ್ಯ ನೋಡಿಕೊಳ್ಳಲು ಮನೆಗೆ ಬರುತ್ತಲಿದ್ದರು. ಬರುವಾಗ ಆಳು ಮನುಷ್ಯರಿಗೆ ಇಷ್ಟಿಷ್ಟು ಕೆಲಸ ಸಾಯಂಕಾಲದೊಳಗೆ ಮುಗಿಸಿಬರಬೇಕೆಂದು ಹೇಳಿ ಬರುತ್ತಲಿದ್ದರು.

ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಮೆಚ್ಚಿಗೆಯಾಯಿತು. ಈ ದಂಪತಿಗಳಿಗೆ ಇಬ್ಬರು ಹೆಣ್ಣು ಮಕ್ಕಳೂ ಐವರು ಗಂಡು ಮಕ್ಕಳೂ ಜನಿಸಿದರು. ಊರಿಗೆ ಊರೇ ಸಂತೋಷ ಪಟ್ಟಿತು.

ಹಿರಿಯಮಗಳು ಪಾರ್ವತಿದೇವಿ ಮತ್ತು ಕೊನೆಯ ಮಗಳು ಡಾ.ವಿಜಯಲಕ್ಷ್ಮಿ ಇಬ್ಬರು ಹೆಣ್ಣು ಮಕ್ಕಳನ್ನು ಹೆತ್ತ ತಾಯಿ ರಂಗಮ್ಮ ಗೌಡತಿ ಸುಭಾಷಚಂದ್ರ, ಶರಚ್ಚಂದ್ರ, ಜಗದೀಶಚಂದ್ರ, ಹೇಮಚಂದ್ರ, ಸತೀಶಚಂದ್ರ ಈ ಐವರು ಗಂಡು ಮಕ್ಕಳಿಗೆ ಜನ್ಮ ನೀಡಿದರು..

**ಪಾರ್ವತಿದೇವಿ :**

ಶಂಕರಶೆಟ್ಟಿ ಪಾಟೀಲ ಮತ್ತು ರಂಗಮ್ಮ ಗೌಡತಿ ದಂಪತಿಗಳ ಹಿರಿಯ ಮಗಳಾದ ಪಾರ್ವತಿ ದೇವಿಗೆ ಗೌಡರು ಬಿ.ಎ.ವರೆಗೆ ಓದಿಸಿದರು. ಸ್ತ್ರೀಯರಿಗೆ ಶಿಕ್ಷಣ ಸಾಕು ಎನ್ನುವ ಆ ಕಾಲದಲ್ಲಿ ಅದೂ ಮೊಗಲಾಯಿ ರಾಜ್ಯದಲ್ಲಿ ಧೈರ್ಯದಿಂದ ಗೌಡರು ಪಾರ್ವತಿದೇವಿಯನ್ನು ನಾಗಪುರಕ್ಕೆ ಕಳಿಸಿ ಅಲ್ಲಿ ಹಾಸ್ಟೆಲಿನಲ್ಲಿ ಇರುವ ವ್ಯವಸ್ಥೆಮಾಡಿ ಬಿ.ಎ.ಪದವಿಯನ್ನು ನಾಗಪುರ ವಿಶ್ವವಿದ್ಯಾಲಯದಿಂದ ಪಡೆಯುವಂತೆ (೧೯೫೬ರಲ್ಲಿ) ಅನುಕೂಲ ಮಾಡಿಕೊಟ್ಟದ್ದು ಸ್ತ್ರೀಯರಿಗೆ ಶಿಕ್ಷಣ ಕೊಡಿಸಬೇಕು ಎನ್ನುವದಕ್ಕೆ ತಾವೇ ಸಾಕ್ಷಿಯಾದಂತಿದೆ.

ಪಾರ್ವತಿದೇವಿಯವರನ್ನು ಇಂದಿನ ಮಹಾರಾಷ್ಟ್ರರಾಜ್ಯದ ಬಾರ್ಸಿಯ ಪ್ರತಿಷ್ಠಿತ ಮನೆತನದ ರಾಜಭಾವು ಐನಾಪುರ ನ್ಯಾಯವಾದಿಗಳಿಗೆ ಲಗ್ನಮಾಡಿಕೊಟ್ಟರು. ಗಂಡ ಹೆಂಡರು ಅನ್ಯೋನ್ಯ ಪ್ರೀತಿಯಿಂದ ಬದುಕುತ್ತಿದ್ದ ಈ ದಂಪತಿಗಳಿಗೆ ರಾಜಶೇಖರ (ಬಿ.ಇ)ಮತ್ತು ರಚಿತಾ ಇಬ್ಬರು ಮಕ್ಕಳಿರುವರು. ವಿಧಿಯ ಕೈವಾಡ, ಇವರ ಮನೆಯ ಬದಿಗೆ ರೈಲುಮಾರ್ಗ ಹಾದುಹೋಗಿರುವದು. ಪಾರ್ವತಿದೇವಿ ವಾಯುವಿಹಾರಕ್ಕೆ ಹೋದಾಗ ಅವಳ ಸೀರೆ ಸೆರಗು ರೈಲಿಗೆ ಸಿಕ್ಕು ದುರ್ಮರಣಕ್ಕೀಡಾದದ್ದು ತುಂಬಿಬಾರದ ಹಾನಿಯಾಗಿರುವುದು. ಶಂಕರಶೆಟ್ಟಿಯವರು ತಮ್ಮ ಮನೆಯಲ್ಲೇ ಸ್ತ್ರೀಶಿಕ್ಷಣವನ್ನು ಪ್ರಾರಂಭಿಸಿ ಊರಿನ ಮಹಿಳೆಯಯರಿಗೆ ಹುಡುಗಿಯರಿಗೆ ಶಿಕ್ಷಣ ಪಡೆಯಲು ಪ್ರೋತ್ಸಾಹಿಸಿದ್ದನ್ನು ನೆನೆಯಬಹುದು.

**ಸುಭಾಷಚಂದ್ರ :**

ಸುಭಾಷಚಂದ್ರರು ಶಂಕರಶೆಟ್ಟಿ ಅವರ ಹಿರಿಯ ಪುತ್ರರು. ಇವರು ದಿ :೨೯.೫.೧೯೩೭ ರಂದು ಜನಿಸಿದವರಾಗಿದ್ದು ಎಂ.ಎ. ಪದವೀಧರರಿರುವರು. ಮೊದಲು ಇವರು ಕಮರ್ಸಿಯಲ್ ಟ್ಯಾಕ್ಸ ಇನಸ್ಪೆಕ್ಟರರಾಗಿ ಸೇವೆಯಲ್ಲಿದ್ದು ಖಾನದಾನಿ ಮನೆತನದಿಂದ ಬಂದವರು ನವಕರಿ ಮಾಡುವುದೇಕೆಂದು ಆ ನವಕರಿ ಬಿಟ್ಟು ಸಮಾಜಸೇವೆಯಲ್ಲಿ ತಂದೆಯವರ ಜೊತೆಗೆ ಇವರೂ ಸೇರಿಕೊಂಡರು. ಕ್ರಿ.ಶ.೧೯೭೨ರ ಸಾರ್ವಜನಿಕ ಚುನಾವಣೆಯಲ್ಲಿ ಕಮಲಾಪೂರ ಕ್ಷೇತ್ರದಿಂದ ವಿಧಾನಸಭಾ ಸದಸ್ಯರಾಗಿ, ಶಾಸಕರಾಗಿ ಆಯ್ಕೆಯಾದರು. ತಮ್ಮ ಶಾಸಕ ಅವಧಿಯಲ್ಲಿ ಈಭಾಗದ ಸರ್ವತೋಮುಖದ ಅಭಿವೃದ್ಧಿಗಾಗಿ ಪರಿಶ್ರಮಪಟ್ಟವರಾಗಿದ್ದಾರೆ. ಮತದಾರರ ಪ್ರೇಮ ಗಳಿಸಿಕೊಂಡವರಾಗಿದ್ದು ಸಾವಿರಾರು ಸ್ನೇಹಿತರ ಬಳಗ ಕಟ್ಟಿಕೊಂಡವರಿವರು.

ಸುಭಾಷ ಅವರ ಲಗ್ನವು ರಾಯಚೂರಿನ ಡಾ.ಶಾಂತಾದೇವಿ ಅವರೊಂದಿಗೆ ಆಗಿದ್ದು, ಇವರಿಗೆ ವಿನಯ (ಬಿ.ಇ.) ಮತ್ತು ಭಾರತಿ(ಎಮ್.ಡಿ.ಜಿ.ಓ) ಪದವೀಧರ ಮಕ್ಕಳಿರುವರು. ಸರಳ ಸ್ವಭಾವದ ನಿರಾಡಂಬರ ಜೀವಿಗಳಾದ ಶ್ರೀಸುಭಾಷ ಪಾಟೀಲರು ತಂದೆಯವರಂತೆ ಜನಾನುರಾಗಿಗಳಾಗಿರುವರು.

**ಶರಶ್ಚಂದ್ರ :**

ಶರಶ್ಚಂದ್ರ ಪಾಟೀಲರು ಶಂಕರಶೆಟ್ಟಿ ಪಾಟೀಲರ ಇಚ್ಛೆಯ ಮೇರೆಗೆ ಬಿ.ಎಸ್ಸಿ. ಪದವೀಧರರಿದ್ದರು. ತರುವಾಯ ಎಲ್.ಎಲ್ ಬಿ. ಪದವಿ ಪಡೆದುಕೊಂಡು ನ್ಯಾಯವಾದಿಗಳಾಗಿ ಗುಲಬರ್ಗಾ ನಗರದಲ್ಲಿ ವಕಾಲತ್ತು ನಡೆಸತೊಡಗಿದರು. ಇವರ ಲಗ್ನವು ಡಾ.ಪಾರ್ವತಿದೇವಿ ಅವರೊಂದಿಗೆ ಆಗಿದ್ದು ಇವರು ಸ್ಥಳೀಯ ರಾಮಪುರೆ ಮೆಡಿಕಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದವರಾಗಿದ್ದಾರೆ. ಈ ದಂಪತಿಗಳಿಗೆ ನೀರಜ ಮತ್ತು ಸೂರಜ ಇಬ್ಬರು ಮಕ್ಕಳಿರುವರು. ನೀರಜ ವೈದ್ಯಪದವೀಧರರಿದ್ದು ಲಂಡನ್ನದಲ್ಲಿ ವಾಸಮಾಡಿಕೊಂಡಿರುವರು. ಇವರು ಅಲ್ಲಿಯ ಲೇಬರ್ ಪಾರ್ಟಿಯ ಸಕ್ರಿಯ ಕಾರ್ಯಕರ್ತರೂ ಆಗಿದ್ದು ಇತ್ತೀಚಿಗೆ ನಡೆದ ಕಾರ್ಪೋರೇಶನ್ ಚುನಾವಣೆಯಲ್ಲಿ ಸ್ಪರ್ಧೆಗೆ ನಿಂತು ಕಾರ್ಪೋರೇಟರರಾಗಿ ಆರಿಸಿಬಂದಿರುವುದು ಹೆಮ್ಮೆಯ ವಿಷಯವಾಗಿದೆ. ಸೂರಜ ತೋಟಪಟ್ಟಿ ಉದ್ಯೋಗ ನೋಡಿಕೊಳ್ಳುತ್ತಲಿರುವರು. ಶರಶ್ಚಂದ್ರರು ಖ್ಯಾತ ನ್ಯಾಯವಾದಿಗಳಾಗಿದ್ದರು. ದುರ್ದೈವ ದಿ.೩-೧೨-೧೯೯೪ರಂದು ಹೃದಯಾಘಾತದಿಂದಾಗಿ ದುರ್ಮರಣಕ್ಕೀಡಾದರು.

**ಜಗದೀಶಚಂದ್ರ :**

ಜಗದೀಶಚಂದ್ರರು ದಿ.೯-೫-೧೯೪೩ರಂದು ಜನಿಸಿದರು. ಇವರ ಲಗ್ನವು ಗುಲಬರ್ಗಾದ ದೇವಣಿ ಮನೆತನದ ಶ್ರೀಮತಿ ಕಸ್ತೂರಿ ಅವರೊಂದಿಗೆ ಆಗಿದ್ದು, ಇವರಿಗೆ ಜ್ಯೋತಿ, ರೇಖಾ ಮತ್ತು ಜಯಶ್ರೀ ಮೂವರು ಹೆಣ್ಣು ಮಕ್ಕಳಿದ್ದು, ಜ್ಯೋತಿ ಮತ್ತು ರೇಖಾ ಎಂ.ಟೆಕ್ ಪದವೀಧರ ಇಂಜಿನಿಯರರಿರುವರು. ಜಯಶ್ರೀ ಎಂ.ಡಿ.ಪದವೀಧರೆ ಇರುವರು. ಶರಣಬಸಪ್ಪ ಮತ್ತು ಸಿದ್ಧರಾಮ ಇಬ್ಬರು ಗಂಡುಮಕ್ಕಳಿದ್ದು ಶರಣಬಸಪ್ಪ ತಮ್ಮನ್ನು ಸಾಮಾಜಿಕ ಸೇವೆಗೆ ತೊಡಗಿಸಿಕೊಂಡಿರುವರು. ಸಿದ್ಧರಾಮ ಅವರು ಎಂ.ಡಿ. ಪದವೀಧರರಿರುವರು.

ಜಗದೀಶಚಂದ್ರರು ಸಹಕಾರಿ ಕ್ಷೇತ್ರದಲ್ಲಿ ತಮ್ಮನ್ನು ಸೇವೆಯಲ್ಲಿ ತೊಡಗಿಸಿಕೊಂಡಿರುವರು. ಅಪೆಕ್ಸ ಬ್ಯಾಂಕಿನ ನಿರ್ದೇಶಕರಾಗಿಯೂ ಕೆಲಸ ಕಾರ್ಯ ಮಾಡಿದವರಾಗಿದ್ದಾರೆ.

## ಹೇಮಚಂದ್ರ ಪಾಟೀಲ :

ಹೇಮಚಂದ್ರ ಪಾಟೀಲರು ೧೨-೮-೧೯೫೦ ರಂದು ಜನಿಸಿರುವರು. ಇವರು ಹೊಲ ಮನೆ ಕೆಲಸಕಾರ್ಯಗಳನ್ನು ನೋಡಿಕೊಳ್ಳುತ್ತಲಿರುವರು. ಸರಳ ಸಜ್ಜನಿಕೆಗೆ ಹೆಸರುವಾಸಿಯಾಗಿರುವ ಹೇಮಚಂದ್ರರ ಲಗ್ನ ಮಂಠಾಳದ ದೇಶಮುಖರ ಮಗಳು ರಾಜಮತಿ ಅವರೊಂದಿಗೆ ಆಗಿದ್ದು, ಇವರಿಗೆ ಪ್ರಭಾತರಂಜನ (ಸಿ.ಟಿ.ಆಯ್) ಅನಿತಾ ಬಿ.ಕಾಂ, ಚಿತ್ರರಂಜನ ಬಿ.ಕಾಂ, ಪ್ರಿಯರಂಜನ ಎಮ್.ಸಿ.ಎ. ಹೀಗೆ ನಾಲ್ವರು ಮಕ್ಕಳಿರುವರು. ಪ್ರಭಾತರಂಜನರು ಕಮರ್ಸಿಯಲ್ ಟ್ಯಾಕ್ಸ ಇನ್‌ಸ್ಪೆಕ್ಟರರಾಗಿರುವರು. ರಂಜನರು ಬೆಂಗಳೂರಿನ ಸಾಫ್ಟ್‌ವೇರ್ ಕಂಪನಿಯಲ್ಲಿ ಇಂಜನಿಯರರಾಗಿದ್ದಾರೆ.

## ಸತೀಶ ಚಂದ್ರ :

ಸತೀಶ ಪಾಟೀಲರು ೨೩-೭-೧೯೫೩ರಲ್ಲಿ ಜನಿಸಿದ್ದು, ಮಂಡಳ ಪಂಚಾಯ್ತಿ ಅಧ್ಯಕ್ಷರಾಗಿದ್ದರು. ಕಮಲಾಪೂರದಲ್ಲಿದ್ದು ಗ್ರಾಮದ ಏಳ್ಗೆಯಲ್ಲಿ ಶ್ರಮಿಸುತ್ತಲಿರುವರು. ಇವರ ಲಗ್ನವು ಕಿಲಾರಿಯ ಗಾಂವಕರೆ ಅವರ ಮಗಳು ನಿರ್ಮಲಾದೇವಿ ಅವರೊಂದಿಗೆ ಆಗಿದೆ. ಇವರಿಗೆ ಸಂತೋಷ ಬಿ.ಇ.,ಸಂಗೀತಾ ಎಂ.ಟೆಕ್, ಸುಚಿತ್ರಾ ಎಂ,ಎ.ಬಿ.ಎಡ ಶೀತಲ ಬಿ.ಎ.,ನಾಲ್ವರುಮಕ್ಕಳಿರುವರು.

## ಡಾ. ವಿಜಯಲಕ್ಷ್ಮಿ :

ಡಾ. ವಿಜಯಲಕ್ಷ್ಮಿ ಅವರು ಶಂಕರಶೆಟ್ಟಿ ಪಾಟೀಲ ಮತ್ತು ರಂಗಮ್ಮ ಗೌಡತಿ ದಂಪತಿಗಳ ಕೊನೆಯ ಮಗಳು. ಇವರು ಎಂ.ಬಿ.ಬಿ.ಎಸ್. ವೈದ್ಯಕೀಯ ಪದವೀಧರೆಯಾಗಿರುವರು. ಇವರು ಜನಿಸಿದುದು ದಿ.೨೮-೪-೧೯೫೫ರಂದು. ಕುಟುಂಬ ಯೋಜನೆಯಲ್ಲಿ ವೈದ್ಯರಾಗಿ ಸೇವೆ ಸಲ್ಲಿಸುತ್ತಲಿರುವರು.

ಡಾ.ವಿಜಯಲಕ್ಷ್ಮಿ ಅವರನ್ನು ಬೀದರ ಜಿಲ್ಲಾ ಔರಾದ ತಾಲೂಕಿನ ಮುಧೋಳದ ಬಸವರಾಜ ಖಂಡೆ ಎಕ್ಸಿ. ಇಂಜಿನಿಯರ್ ಅವರಿಗೆ ಕೊಟ್ಟು ಲಗ್ನ ಮಾಡಿರುವರು. ಈ ದಂಪತಿಗಳಿಗೆ ಹರ್ಷಾ ಹೆಸರಿನ ಮಗಳಿದ್ದು ಇವರು ಎಂ.ಟೆಕ್ ಪದವಿ ಪಡೆದವರಾಗಿದ್ದಾರೆ.

ತಾಯಿ ರಂಗಮ್ಮ ಏಳುಮಕ್ಕಳ ತಾಯಿಯಾಗಿ ಅವರ ಪಾಲನೆ ಪೋಷಣೆ ಮಾಡಿ, ಬೆಳೆಸಿ ಆದರ್ಶ ತಾಯಿಯಾಗಿ, ಪತಿಗೆ ತಕ್ಕ ಸತಿಯಾಗಿ, ಸೊಸೆಯಂದಿರರಿಗೆ ಪ್ರೀತಿಯ ಅತ್ತೆಯಾಗಿ, ಮನೆಯ ಆರ ಭಾರ ಹೊತ್ತ ಸಾಧ್ವಿಮಣಿ ಗೌಡತಿಯಾಗಿ ಹೆಸರು ಪಡೆದು ದಿ ೨೨-೫-೨೦೦೪ರಂದು ನಿಧನಹೊಂದಿರುವರು.

ತೊಟ್ಟಿಲ ತೂಗುವ ಕೈ ರಾಷ್ಟ್ರವನ್ನೇ ತೂಗಬಲ್ಲದು ಎಂಬ ಮಾತಿಗೆ ಸಾಕ್ಷಿಯಾಗಿ ರಂಗಮ್ಮ ತಾಯಿ ಎಲ್ಲ ಮಕ್ಕಳನ್ನು ಪತಿದೇವರನ್ನೂ ಚೆನ್ನಾಗಿ ನೋಡಿಕೊಳ್ಳುವುದರ ಜೊತೆಗೆ ಮನೆತನದ ಎಲ್ಲ ಜವಾಬ್ದಾರಿಯನ್ನೂ ಹೊತ್ತು ಮನೆತನದ ಕೀರ್ತಿ ಹೆಚ್ಚಿಸಿದವರಾಗಿದ್ದಾರೆ. ಶಂಕರ ಶೆಟ್ಟಿ ಪಾಟೀಲರಿಗೆ ಸರ್ವಜ್ಞ ಸಾರಿದಂತೆ ವಾಸಮಾಡಿಕೊಂಡಿರಲು ಬೆಚ್ಚ ನಾ ಮನೆಯಿತ್ತು, ಜೊತೆಗೆ ಇಚ್ಛೆಯನ್ನು ಅರಿತು ನಡೆಯುವ ಸತಿ ರಂಗಮ್ಮ ಇದ್ದುದರಿಂದ ಸಮಾಜದ, ರಾಷ್ಟ್ರದ ಸೇವೆ ಸಲ್ಲಿಸಲು ಅನುಕೂಲವಾಯಿತು. ಸಮಾಜ ಸೇವಕರೆನಿಸಿದರು. ಎಲ್ಲರ ಗಮನ ಸೆಳೆದವರಾದರು.

ನ್ಯಾಯನಿಷ್ಠುರಿ: ದಾಕ್ಷಿಣ್ಯಪರ ನಾನಲ್ಲ
ಲೋಕ ವಿರೋಧಿ : ಶರಣ
ನಾನಾರಿಗೂ ಅಂಜುವವನಲ್ಲ
ಕೂಡಲ ಸಂಗಮದೇವರ ರಾಜತೇಜದಲ್ಲಿಪ್ಪೆನಾಗಿ.

– ಬಸವಣ್ಣನವರು

## ಪೋಲಿಸ ಪಾಟೀಲರಾಗಿ ಗೌಡರು :

ಶಂಕರಶೆಟ್ಟಿ ಪಾಟೀಲರು ವಂಶಪಾರಂಪರ್ಯವಾಗಿ ಬಂದ ಕಮಲಾಪೂರದ ಗೌಡಕಿ ಕೆಲಸವನ್ನು ತಂದೆ ರಾಚಪ್ಪಗೌಡರ ತರುವಾಯ ಮುಂದುವರಿಸಿದರು. ಇಲಾಖಾ ಪರೀಕ್ಷೆಗಳನ್ನು ಪಾಸಾದರು. ಈ ಪರೀಕ್ಷೆಗಳು ಉರ್ದು ಭಾಷೆಯಲ್ಲಿಯೆ ನಡೆಯುತ್ತಿದ್ದವು. ಆ ಪರೀಕ್ಷೆಗಳನ್ನು ಉರ್ದುವಿನಲ್ಲಿಯೆ ಬರೆದು ಮೆಚ್ಚುಗೆ ಪಡೆದರು.

೧. ಕಾನೂನು ಮಾಲಗು ಜಾರಿ

೨. ಕಾನೂನು ಬುಚರಾಯಿ ಜಾನವಾರಾನ ಚುಕಾರಿ

೩. ಖಾವಾಯಿಂದ ಬಂದೊಬಸ್ತ

೪. ತಬರೂರ ಶೇತಶಿಂದಿ ಬೇಗರಿಯಾನ್

೫.ದಸ್ತುರ ಅಮಲ್ ಪಟೇಲ್ ಪಟವಾರಿಯನ್

೬. ಮುಕ್ತೆ ಮಾರಾಟ ಕೋತ ವಾಲ ಪಟ್ತೆಲಾನ್

೭. ಹಿಸಾಬ ಕಿರ್ದಿ ಖಾತಾ

೮. ದಾಯ್ಯಮಾಸ ಸರಾಸರಿ

೯. ದಸ್ತಬಂದ ಅಬವಾಯಿ

೧೦. ತರತಿಬ ನಮೂನೆ ಜಾತದೇಹಿ

ಗ್ರಾಮದ ಆಗುಹೋಗುಗಳ ಕುರಿತು ಅಂದಂದೇ ರಜಿಸ್ಟರ್ ಬರೆದಿಡುವ ಪರಿಪಾಠ ಪಾಟೀಲರದು. ಅಂತಿಮ ತಪಾಸಣೆಗೆ ಬಂದವರು ಒಳ್ಳೆಯ ಷರಾ ಬರೆದುಹೋಗುತ್ತಲಿದ್ದರು. ಶಂಕರಶೆಟ್ಟಿ ಪಾಟೀಲರ ಜೊತೆಗೆ ನಾರಾಯಣರಾವ ಕುಲಕರ್ಣಿಯವರು ಪಟವಾರಿಗಳಾಗಿದ್ದರು. ಗುರುಶಾಂತಪ್ಪ ಪಾಟೀಲರು ಮಾಲಿಪಾಟೀಲರಾಗಿದ್ದರು. ಇವರು ಸರಕಾರದ ಪ್ರತಿನಿಧಿಗಳಾಗಿ ಕೆಲಸಮಾಡುತ್ತಿದ್ದರು.

ಶಂಕರ ಶೆಟ್ಟಿ ಪಾಟೀಲರು ಪೋಲಿಸ ಇಲಾಖೆಗೆ ಸಂಬಂಧಪಟ್ಟ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಲಿದ್ದರು. ಅಹಿತಕರ ಘಟನೆಗಳು ನಡೆಯದಂತೆ ಜಾಗೃತಿ ವಹಿಸುತ್ತಲಿದ್ದರು. ಇವರದು ಸತ್ಯಶುದ್ಧ ಕಾಯಕನಿಷ್ಠೆ, ಲಂಚಗುಳಿತನವು ಇವರ ಹತ್ತಿರ ಸುಳಿಯದು, ಯಾರಿಗೂ ಲಂಚಕೊಡರು. ಯಾರಿಂದಲೂ ಲಂಚ ತೆಗೆದುಕೊಂಡವರೂ ಅಲ್ಲ. ಕ್ರಿಯಾಶೀಲ

ವ್ಯಕ್ತಿಗಳಾಗಿದ್ದರು. ಕಾಯಕ ದಾಸೋಹ ತತ್ವಗಳಂತೂ ಇವರ ಜೀವನದಲ್ಲಿ ಹಾಸು ಹೊಕ್ಕಾಗಿದ್ದವು. ಎಲ್ಲರೊಂದಿಗೆ ಹೊಂದಿಕೊಂಡು ನಡೆಯುವವರಾದರೂ ನ್ಯಾಯನಿಷ್ಠುರರು. ನೀತಿಯ ನೆಲಗಟ್ಟಿನ ಮೇಲೆ ಬಾಳಿ ಬದುಕುತ್ತಿರುವಂಥವರು. ಅಷ್ಟೇ ಪ್ರಾಮಾಣಿಕರೂ ಆಗಿದ್ದರು. ಇವರ ಕಾರ್ಯದಕ್ಷತೆ, ನಿಷ್ಠೆ ವಿಶ್ವಾಸವನ್ನು ಪ್ರತ್ಯಕ್ಷ ಕಂಡ ಶಿರಸ್ತೇದಾರರು ಇವರನ್ನು ಹಲವಾರು ಗ್ರಾಮಗಳ ಕಂದಾಯ ಮೇಲ್ವಿಚಾರಕರನ್ನಾಗಿ ನೇಮಿಸಿದ್ದರು. ಸೊಂತ, ಮರಗುತ್ತಿ, ಡೊಂಗರಗಾವ, ಭೂಯಾರ, ಬೇಲೂರ, ಜೀವಣಗಿ, ಕಲಮೂಡ, ರಾಜನಾಳ, ಓಕಳಿ,ವರನಾಳ ಈ ಗ್ರಾಮ.ಗಳ ಂದಾಯವನ್ನು ಬಹಳ ವ್ಯವಸ್ಥಿತ ರೀತಿಯಿಂದ ವಸೂಲಿ ಮಾಡುತ್ತಲಿದ್ದದ್ದು ಮೇಲಾಧಿಕಾರಿ ' ಗಮ.. ಸೆಳೆದಿತ್ತು.

ಸರಕಾರಿ ಕೆಲಸದ ಮೇಲೆ ಬರುವ ಅಧಿಕಾರಿಗಳಿಗೆ ಹಳ್ಳಿಗಳಲ್ಲಿ ಪ..ತಿಗೆಂದು ವ್ಯವಸ್ಥೆ ಇದ್ದಿರಲಿಲ್ಲ.ಬಂದವರಿಗೆ ಫೈಸ್ ಜಾಗನೋಡಿ ಡೇ.ು ಹಾಕುತ್ತಿದ್ದರು. ಹೈದ್ರಾಬಾದ ಸಿವಿಲ್ ಅಭ್ಯರ್ಥಿಗಳಿಗೆ ಗ್ರಾಮ ಮಟ್ಟದ ತರಬೇತಿಗೆಂದು ಕಮಲಾಪೂರದ ಈ ಗೌಡರಲ್ಲಿಯೆ ಕಳಿಸಿಕೊಡುತ್ತಲಿದ್ದರು. ಶಂಕರ ಶೆಟ್ಟರು ಅವರಿಗೆ ದಪ್ತರಗಳ ಮಾಹಿತಿ ಹೇಳಿಕೊಡುತ್ತಿದ್ದರು. ಗುಲಬರ್ಗಾ ಜಿಲ್ಲೆಗೆ ಆಫೀಸರರಾಗಿ ಬಂದ ಬಹಳಷ್ಟು ಆಫೀಸರರು ಈ ಗೌಡರಲ್ಲಿ ಮಾರ್ಗದರ್ಶನ ಪಡೆದವರೇ ಆಗಿರುತ್ತಿದ್ದರು. ಹೀಗಾಗಿ ಪಾಟೀಲರು ಯಾವುದೇ ಕಛೇರಿಗೆ, ಯಾವುದೇ ಕೆಲಸ ಕಾರ್ಯಗಳಿಗೆ ಹೋದರೂ ಅಲ್ಲಿ ಅವರ ಕೆಲಸಗಳನ್ನು ಯಾವ ಅಧಿಕಾರಿಗಳೂ ತಡೆಹಿಡಿಯುತ್ತಿದ್ದಿರಲಿಲ್ಲ. ಸಾರ್ವಜನಿಕ ಹಣವೇ ಇರಲಿ, ಸರಕಾರದ ಹಣವೇ ಇರಲಿ ಗೌಡರದು ಶುದ್ಧ ಹಸ್ತ, ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯರಾಗಿರುತ್ತಿದ್ದರು. ಶ್ರೀಶಂಕರಶೆಟ್ಟಿ ಪಾಟೀಲರು ಗ್ರಾಮ ಸುಧಾರಣೆಯ ಕೆಲಸಕ್ಕೆ ಟೊಂಕಕಟ್ಟಿ ನಿಲ್ಲುತ್ತಿದ್ದರು. ಸರಕಾರದ ಯೋಜನೆಗಳನ್ನು ಕಮಲಾಪೂರಕ್ಕೂ, ತಮ್ಮ ಮತಕ್ಷೇತ್ರಕ್ಕೂ ಹಾಕಿಸಿಕೊಂಡು ಅವು ಕಾರ್ಯರೂಪಕ್ಕೆ ಬರುವಂತೆ ಪ್ರಯುತ್ನಿಸುತ್ತಲಿದ್ದರು. ಹೈದರಿ ರಿಫಾರ್ಮ ಹೆಸರಿನ ಯೋಜನೆಯೊಂದನ್ನು ಆರ್ಥಿಕ ಅಭಿವೃದ್ಧಿಗಾಗಿ ಗಲ್ಲಾಗೋದಾಯ್ ಗ್ರೀನ್ ಬ್ಯಾಂಕ್ ಪ್ರಾರಂಭ ಮಾಡಿಸಿದರು. ಕಮಲಾಪೂರದಿಂದ ಹೆದ್ದಾರಿಗೆ ಹೋಗಲು ಕೂಡುದಾರಿಯಿದ್ದಿರಲಿಲ್ಲ. ಹಳ್ಳದ ಗುಂಟ ಮುಳಗಳ್ಳಿ, ಕಂಟಿದಾಟಿ ಹೋಗಬೇಕಾಗುತ್ತಿತ್ತು. ಇದನ್ನು ಸರಕಾರದ ಗಮನಕ್ಕೆ ತಂದು ಕೂಡುದಾರಿಯೊಂದನ್ನು ಮಾಡಿಸುವಲ್ಲಿ ಯಶಪಡೆದರು. ಕುಡಿಯುವ ನೀರಿಗಾಗಿ ದಾರಿಗುಂಟ ಬಾವಿಗಳನ್ನೂ ತೋಡಿಸಿ, ಗಿಡಗಳನ್ನೂ ಹಚ್ಚಿಸಿದ್ದು, ಶಂಕರ ಶೆಟ್ಟಿ ಪಾಟೀಲರ ಪ್ರಯತ್ನವೇ ಎಂದ್ಹೇಳಬಹುದಾಗಿದೆ. ಕಮಲಾಪೂರ ಗುಡ್ಡ ಕ್ರೂರಪ್ರಾಣಿಗಳ ಕಾಡಾಗಿದ್ದುದನ್ನು ನಿಜಾಮ ಸರಕಾರದ ಗಮನಕ್ಕೆ ತಂದು ಆ ಕ್ರೂರಪ್ರಾಣಿಗಳನ್ನು ಅಲ್ಲಿಂದ ಹಿಡಿಯಿಸಿ ರಾಜಧಾನಿಯ ಮ್ಯೂಜಿಯಂಗೆ ಕಳಿಸಿದ್ದು ಜನ ಇನ್ನೂ ನೆನಪಿನಲ್ಲಿಟ್ಟುಕೊಂಡಿರುವರು. ಹಳ್ಳಿಗಳಲ್ಲಿದ್ದಂತೆ

ಕಮಲಾಪೂರದಲ್ಲಿಯೂ ಬೀದಿಗುಂಟ ಬೆಳಕಿನ ವ್ಯವಸ್ಥೆ ಇದ್ದಿರಲಿಲ್ಲ. ನಿಜಾಮನ ಬೆಳ್ಳಿಹಬ್ಬದ ಆಚರಣೆಗೆಂದು ವಸೂಲಿಮಾಡಿದ್ದ ಉಳಿದ ಹಣವನ್ನು ಗ್ಯಾಸ್ ತೇಲದ ವ್ಯವಸ್ಥೆಗಾಗಿ ಖರ್ಚುಮಾಡಿದ್ದು, ಅವರ ಸೇವಾ ಪ್ರಾಮಾಣಿಕತೆಗೆ ನಿದರ್ಶನವಾಗಿರುವುದು.

ಈ ವಿಷಯದಲ್ಲಿ ಯಾರೋ ದುಷ್ಟರು ದುಡ್ಡು ತಿಂದು ಹಾಕಿದ್ದಾರೆಂದು ಮೂಕರ್ಜಿ ಸಲ್ಲಿಸಿದರು. ಸರಕಾರ ತನಿಖಾಧಿಕಾರಿಗಳನ್ನು ಕಳಿಸಿತು. ಬಂದ ಅಧಿಕಾರಿಗಳು ಕೂಲಂಕುಶ ಪರಿಶೀಲನೆ ನಡೆಸಿ, ಇದರಲ್ಲಿ ಯಾವ ತಪ್ಪು ಇಲ್ಲ ಎಂದು ಮನಗಂಡು ದುಷ್ಟರ ಕುತಂತ್ರವಿದೆಂದು ಸರಕಾರಕ್ಕೆ ವರದಿ ಸಲ್ಲಿಸಿತು. ಗೌಡರ ಪ್ರಾಮಾಣಿಕತೆಯನ್ನು ಈ ಘಟನೆ ಇನ್ನೂ ಹೆಚ್ಚಿಸಿತು.

ಪಾಟೀಲರ ದೂರದೃಷ್ಟಿ ಹಾಗೂ ಪ್ರಯತ್ನದಿಂದಾಗಿ ಔದ್ಯೋಗಿಕ ತರಬೇತಿ ಕೇಂದ್ರ, ಸರಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ, ಖಾದಿ ಗ್ರಾಮೋದ್ಯೋಗ ಸಂಘ, ಸರಕಾರಿ ಗ್ರಾಮೀಣ ವಿವಿಧ ಕರಕುಶಲ ಕರ್ಮಿ ಕೇಂದ್ರ, ಸರಕಾರಿ ಪಶುಚಿಕಿತ್ಸಾ ಕೇಂದ್ರ, ನಾಡ ಕಾರ್ಯಾಲಯ, ಸರಕಾರಿ ಸಂಯುಕ್ತ ಪದವಿಪೂರ್ವ ಕಾಲೇಜು, ಸರಕಾರಿ ಪ್ರೌಢ ಶಾಲೆಗಳು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಆರಕ್ಷಕ ಠಾಣೆ, ವಿದ್ಯುಚ್ಛಕ್ತಿ ಮಂಡಳಿಯ ವಿಭಾಗೀಯ ಕಾರ್ಯಾಲಯ, ಪಾಲಿಟೆಕ್ನಿಕ್ ಕಾಲೇಜ, ಸರಕಾರಿ ಶಿಕ್ಷಕರ ತರಬೇತಿ ಕಾಲೇಜು ಮೊದಲಾದ ಸಂಸ್ಥೆಗಳನ್ನು ಪ್ರಾರಂಭಿಸಿದ ಶ್ರೇಯಸ್ಸು ಶ್ರೀ ಶಂಕರ ಶೆಟ್ಟಿ ಪಾಟೀಲರಿಗೇ ಸಲ್ಲುತ್ತದೆ.

ಶಂಕರಶೆಟ್ಟಿ ಪಾಟೀಲರದು ಸರಳ ಹಾಗೂ ಸಾದಾಜೀವನ. ಉದಾತ್ತ ವಿಚಾರಗಳನ್ನು ಮೈಗೂಡಿಸಿಕೊಂಡು, ಅವುಗಳನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು, ನುಡಿ– ನಡೆಗಳಲ್ಲಿ ಅರಿವು ಆಚಾರಗಳಲ್ಲಿ ಸಮನ್ವಯ ಸಾಧಿಸಿರುವ ಮಹಾಶರಣರಿವರಾಗಿದ್ದಾರೆ. ಮಹಾತ್ಮಾ ಗಾಂಧೀಜಿಯವರ ಅನುಯಾಯಿಗಳಿವರು. ಖಾದಿಬಟ್ಟೆ ತೊಡುತ್ತ ಬಂದವರು, ತಲೆಯ ಮೇಲೆ ಖಾದಿ ಟೋಪಿ, ಖಾದಿ ಧೋತರ, ಖಾದಿ ಜಾಕೇಟು, ಖಾದಿ ಶರ್ಟ ಇವು ಇವರ ಉಡುಪು. ಜಾಕೀಟಿಗಿರುವ ಪಾಕೀಟುಗಳಿಗಂತೂ ಯಕ್ಷಿಣಿ ಚೀಲದಂತಿದ್ದವು ಎಂದು ಶರಣಯ್ಯ ಸ್ವಾಮಿಯವರು ಬಣ್ಣಿಸಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

"ಅದೊಂದು ಯಕ್ಷಿಣಿ ಚಿಲದಂತಿದೆ, ಸಂಕೀರ್ಣ ಸಾಮಾನುಗಳಿಂದ ತುಂಬಿದ ಮಹಾಪೆಟ್ಟಿಗೆಯಾಗಿದೆ. ಈ ಜಾಕೀಟಿನ ಜೇಬುಗಳಲ್ಲಿ ಕೋರ್ಟಿನ ಕಾಗದ ಪತ್ರಗಳು ಅವಶ್ಯವೆನಿಸಿದ ಫೈಲುಗಳು ಅಪ್ಪಗಳಿಗೆ ಬೇಕಾಗುವ ದಾರ ಸೂಜಿ ಪಿನ್ನುಗಳು ನೂರ ಗ್ರ್ಯಾಂ ಇಂಕ ತುಂಬಿದ ಡಬಲ್ ಫೌಂಟನ್ ಪೆನ್ನು, ಒಂದು ಚಿಕ್ಕ ಡೈರಿ, ತಾರಿಖುಗಳು, ರೈಲ್ವೆ ಗೈಡು, ಬಸ್ಸುಗಳು ವೇಳಾಪತ್ರಿಕೆ——ಇನ್ನೂ ಏನೇನೊ ತುಂಬಿಕೊಂಡಿರುವ ಯಕ್ಷಿಣಿ ಚೀಲ

ಇದಾಗಿತ್ತು. ಕೋರ್ಟು ಕಛೇರಿಗಳಿಗೂ ಊರು ಕೇರಿಗಳಿಗೂ ಹೋಗುವಾಗ ಮಾತ್ರ ಶ್ರೀಶಂಕರಶೆಟ್ಟಿ ಪಾಟೀಲರು ಈ ಮಹಾಯಕ್ಷಿಣೀ ಚೀಲದಂತಿರುವ ಜಾಕಿಟನ್ನು ಹಾಕಿಕೊಂಡು ಹೋಗುತ್ತಿರುವುದು ವಾಡಿಕೆ. ಇದೊಂದು ಚಲಿಸುವ ಮಿನಿ ಕಛೇರಿಯಂತಿರುತ್ತದೆ".

**ಸಮರ್ಪಣ ಭಾವ ಮೆರೆದ ಗೌಡರು :**

ಶ್ರೀಶಂಕರಶೆಟ್ಟಿ ಪಾಟೀಲರ ಕೈಶುದ್ಧ, ಬಾಯಿಶುದ್ಧ, ಕಚ್ಚಿ ಗಟ್ಟಿ. ದುಂದು ವೆಚ್ಚ ಮಾಡಿದವರಲ್ಲ. ಬೀಡಿ ಸಿಗರೆಟ್ ಸೇದಿದವರಲ್ಲ, ಮದ್ಯಪಾನ ಸೇವಿಸಿದವರಲ್ಲ,ಡಂಭಾಚಾರಿಗಳಲ್ಲ; ಅಂತರಂಗ ಬಹಿರಂಗ ಶುದ್ಧರು. ತಮ್ಮ ಗುರು ಶಿವಲಿಂಗಯ್ಯನವರಿಂದ ಇಷ್ಟಲಿಂಗ ದೀಕ್ಷೆ ಪಡೆದುಕೊಂಡು ಚಿಕ್ಕಂದಿನಿಂದಲೂ ಪೂಜೆ, ಧ್ಯಾನ, ಪ್ರಾರ್ಥನೆ, ಜಪ–ತಪ ಮಾಡಿಕೊಂಡು ಬಂದವರು. ಪೂಜೆಯಾದ ಮೇಲೆ ಪ್ರಸಾದ ಸ್ವೀಕರಿಸುವ ವಾಡಿಕೆ. ಊಟದ ಹೊತ್ತಿಗೆ ಯಾರೇ ಮನೆಗೆ ಬರಲಿ ಅವರನ್ನು ಪ್ರಸಾದಕ್ಕೆ ಕೂಡ್ರಿಸಿ ಊಟ ಮಾಡಿಸುತ್ತಲಿರುವರು. ಅಹಂಕಾರ ಇವರ ಸುತ್ತ ಸುಳಿಯದ್ದು. ಪೋಲಿಸ ಗೌಡರಿದ್ದರೂ ದರ್ಪದಿಂದ ಎಂದೂ ಮೆರೆದವರಲ್ಲ, ಅಹಮಿಕೆಯಿಂದ ಬೀಗಿದವರಲ್ಲ, ಹೊನ್ನು, ಹೆಣ್ಣು, ಮಣ್ಣುಗಳ ಬಲೆಯಲ್ಲಿ ಬಿದ್ದವರಲ್ಲ, ಗುರು ಲಿಂಗ ಜಂಗಮಕ್ಕೆ ತನುಮನಧನವನರ್ಪಿಸಿ ಸಮರ್ಪಣಭಾವ ಮೆರೆದವರಾಗಿರುವರು.

**ಪರೋಪಕಾರಿ ಗೌಡರು:**

ಶಂಕರಶೆಟ್ಟಿ ಪಾಟೀಲರು ಬಡವರ ದೀನ–ದಲಿತರ ಕೆಲಸ ಕಾರ್ಯಗಳನ್ನು ಸ್ವಂತ ಖರ್ಚಿನಲ್ಲಿ ಮಾಡಿಸಿಕೊಡುತ್ತಲಿರುವರು. ಪ್ರತಿನಿತ್ಯ ಗೌಡರು ಬೆಳಗಿನ ನಾಲ್ಕು ಗಂಟೆಗೆ ಏಳುವ ಅಭ್ಯಾಸ ಇಟ್ಟುಕೊಂಡಿರುವರು. ದನ ಕರುಗಳ ಸೇವೆ ಮಾಡಿ ಅವುಗಳಿಗೆ ಮೇವು ಹಾಕುತ್ತಾರೆ, ನಂತರ ತಮ್ಮ ದಿನನಿತ್ಯದ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಕುದುರೆಹತ್ತಿ ತಮ್ಮ ಹೊಲಗಳ ದೇಖರೇಖಿಗಾಗಿ ಹೋಗಿಬರುವ ರೂಢಿ ಇಟ್ಟುಕೊಂಡಿರುವರು ಗೌಡರು ಆಳು ಮನುಷ್ಯರನ್ನು ಎಂದೂ ಬೈದವರಲ್ಲ. ಅವರನ್ನು ಮನೆಯ ಮಕ್ಕಳಂತೆ ಕಾಣುವ ಉದಾರ ಹೃದಯಗಳಿವರು. ಅವರೇ ನಾಚಿ ಹೊಲಮನೆ ಕೆಲಸಕ್ಕೆ ಹೋಗುತ್ತಿರುತ್ತಾರೆ.

**ಸ್ತ್ರೀ ಶಿಕ್ಷಣಕ್ಕೆ ಆದ್ಯತೆ :**

ಪುರುಷರಂತೆ ಸ್ತ್ರೀಯರೂ ವಿದ್ಯಾವಂತರಾಗಬೇಕೆಂಬುದು ಶಂಕರಶೆಟ್ಟಿ ಪಾಟೀಲರ ಬಯಕೆಯಾಗಿತ್ತು. ಅಂತೆಯೆ ಪರರಿಗೆ ಹೇಳುವ ಮುನ್ನ, ಮೊದಲು ತಮ್ಮ ಮಕ್ಕಳಿಗೇ ವಿದ್ಯೆ

ಕಲಿಸಿದರು. ಹಿರಿಯಮಗಳು ಪಾರ್ವತಿದೇವಿ ಮ್ಯಾಟ್ರಿಕ್ ಪಾಸಾದರು. ತರುವಾಯ ದೂರದ ನಾಗಪೂರದಲ್ಲಿದ್ದು ಹೆಚ್ಚಿನ ವಿದ್ಯಾಭ್ಯಾಸ ಮಾಡಿ ಬಿ.ಎ ಪದವಿಧರೆಯಾದರು. ಗೌಡರು ತಮ್ಮ ಸೌಭಾಗ್ಯವತಿಯವರಿಗೆ ಯಾವಾಗಲೂ ರೀ ಹಚ್ಚಿ ಮಾತನಾಡುತ್ತಿದ್ದರು, ಗೌರವ ಕೊಡುತ್ತಿದ್ದರು. ಕಮಲಾಪೂರ ಗ್ರಾಮದ ಎಲ್ಲ ಜನರೂ ತಮ್ಮ ತಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸಿದರು. ಗಂಡು ಮಕ್ಕಳೂ ವಿದ್ಯಾವಂತರಾದರು. ಪ್ರತಿಯೊಂದು ಮನೆಯಲ್ಲಿ ಕನಿಷ್ಠ ಒಬ್ಬರಾದರೂ ನವಕರಿಗೆ ಸೇರಿಕೊಂಡರು. ಇದರಿಂದ ಕಮಲಾಪೂರ ಗ್ರಾಮದ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ಮಕ್ಕಳು ಮೊಮ್ಮಕ್ಕಳು ಹೆಚ್ಚೆಚ್ಚು ಕಲಿಯತೊಡಗಿದರು. ದೊಡ್ಡ ದೊಡ್ಡ ಹುದ್ದೆಯಲ್ಲಿ ಅವರಿಂದ ಸೇವೆಸಲ್ಲಿಸುತ್ತಲಿರುವರು. ಇದಕ್ಕೆಲ್ಲ ಕಾರಣಕರ್ತರು ಶಂಕರಶೆಟ್ಟಿ ಪಾಟೀಲರೆಂದರೆ ಅತಿಶಯೋಕ್ತಿಯಲ್ಲ.

### ಮನೆಯ ಮಗನೆನಿಸುವ ಗೌಡರು:

ಕಮಲಾಪೂರ ಗ್ರಾಮವೇ ತಮ್ಮ ಮನೆ. ಅಲ್ಲಿರುವವರೆಲ್ಲರೂ ತಮ್ಮ ಬಳಗವೇ ಎಂದು ಬಗೆದಿರುವ ಗೌಡರು ಯಾವುದೇ ಊರಿಗೆ ಹೋದಾಗ ಆ ಊರಿಗೆ ಕೊಟ್ಟ ಕಮಲಾಪೂರದ ಹೆಣ್ಣು ಮಕ್ಕಳ ಮನೆಗೆ ಹೋಗಿ ಬರುತ್ತಿರುವುದುಂಟು. ಅವರ ಯೋಗಕ್ಷೇಮ ತಿಳಿದಕೊಂಡು ಕಮಲಾಪೂರದ ಅವರ ತಂದೆ ತಾಯಿಗಳಿಗೆ ವಿಷಯ ಮುಟ್ಟಿಸುತ್ತಲಿರುವರು. ಯಾವ ಜಾತಿ ಮತ ಭೇದವಿಲ್ಲದ, ಇವನಾರವ ಇವನಾರವನೆನ್ನದ, ಇವ ನಮ್ಮ ಮನೆಯ ಮಗನೆನಿಸುವ ವಿಶ್ವವಿಶಾಲ ಮನೋಭಾವ ಗೌಡರದು.

ಅನಾರೋಗ್ಯದಿಂದ ಬಳಲುತ್ತಿರುವ ರೋಗಿಗಳನ್ನು ಕಂಡು ಮನಕರಗಿ ಮರುಕಪಟ್ಟುಕೊಂಡು, ಅವರನ್ನು ತಮ್ಮ ಸ್ವಂತ ಖರ್ಚಿನಲ್ಲಿ ಗುಲಬರ್ಗಾ ಆಸ್ಪತ್ರೆಗೆ ಕರೆದುಕೊಂಡು ಹೋಗಿ, ಔಷಧೋಪಚಾರ ಮಾಡಿಸಿ ಕಳಿಸುತ್ತಿರುವ ದಯಾಮೂರ್ತಿಗಳಿವರು. ಊಟದ ಹೊತ್ತಿಗೆ ಯಾರೆ ಮನೆಗೆ ಬಂದರೂ ಅವರಿಗೆ ಊಟಮಾಡಿಸಿ ಕಳಿಸುವ ಮಹಾದಾಸೋಹಿಗಳಿವರು.

### ಕಾಲೇಜು ಪ್ರಾರಂಭ :

ಕ್ರಿ.ಶ.೧೯೭೨ರಲ್ಲಿ ಕರ್ನಾಟಕ ಸರಕಾರವು ಆರು ಸಾವಿರ ಜನಸಂಖ್ಯೆಯಿರುವ ಹಳ್ಳಿಗಳಿಗೆ ಜ್ಯೂನಿಯರ್ ಕಾಲೇಜು ತೆರೆಯುವ ನಿರ್ಣಯ ಕೈಕೊಂಡಿತು. ಆಗ ಗೌಡರು ಕಮಲಾಪೂರಕ್ಕೆ ಒಂದು ಜ್ಯೂನಿಯರ್ ಕಾಲೇಜ ಮಂಜೂರ ಮಾಡಿಸಿದರು. ವಿದ್ಯಾರ್ಥಿಗಳ ಪ್ರವೇಶ ಕಡಿಮೆಯಿದ್ದ ಕಾರಣ ಗೌಡರು ಊರ ಹಿರಿಯರೊಂದಿಗೆ, ಶಿಕ್ಷಕರೊಂದಿಗೆ ವಿಚಾರ ವಿನಿಮಯ ಮಾಡಿದರು. ಬರಗಾಲವಿದ್ದುದರಿಂದ ಆ ವರುಷ ಜನರ ಕೈಯಲ್ಲಿ ಹಣ ಇದ್ದಿರಲಿಲ್ಲ.

ತಮ್ಮ ಮಕ್ಕಳನ್ನು ಕಾಲೇಜಿಗೆ ಕಳಿಸುವುದು ಕಷ್ಟಕರವಾಗಿತ್ತು. ಇದನ್ನರಿತ ಗೌಡರು ಕಮಲಾಪೂರ ಜನರಿಂದ ಬಡ-ಜಾಣ ಮಕ್ಕಳ ಫೀ ತುಂಬಲು ವರ್ಗಣಿ ಕೂಡಿಸಿ, ಸುತ್ತ ಮುತ್ತಲಿನ ಗ್ರಾಮಗಳಿಂದ ವಿದ್ಯಾರ್ಥಿಗಳನ್ನು ಕರೆತಂದು, ಅವರ ಫೀ ತಾವೇ ತುಂಬಿ ಕಾಲೇಜು ಸುಸೂತ್ರವಾಗಿ ನಡೆಯುವಂತೆ ಕ್ರಮಕೈಕೊಂಡರು.

ವಿದ್ಯಾರ್ಥಿಗಳಿಗೆ ಊಟದ ತೊಂದರೆ ಆಗಬಾರದೆಂದಂದು ಮುಷ್ಟಿಫಂಡ ಮೂಲಕ ಉಚಿತ ಪ್ರಸಾದ ನಿಲಯ ಪ್ರಾರಂಭಿಸಿದರು. ಮುಷ್ಟಿಫಂಡ ಎಂದರೆ ಪ್ರತಿಯೊಂದು ಮನೆಯವರು ದಿನಾಲೂ ಒಂದು ಹಿಡಿ ಧಾನ್ಯ ಹಾಕಿದರೆ ಸಾಕು, ಊರವರ ಈ ಧಾನ್ಯ ಸಂಗ್ರಹದಿಂದ ಉಚಿತ ಪ್ರಸಾದ ನಿಲಯ ನಡೆಸತೊಡಗಿದರು.

### ಹರಿಜನೋದ್ಧಾರಕರು:

ಶಂಕರ ಶೆಟ್ಟರು ಗಾಂಧಿವಾದಿಗಳು. ಹರಿಜನರೆಂದರೆ ದೂರಸರಿಯುವ ಆ ಕಾಲದಲ್ಲಿ ಅವರನ್ನು ಆತ್ಮೀಯತೆಯಿಂದ ಕಂಡವರು. ಮನುಷ್ಯರಾದ ನಾವೆಲ್ಲರೂ ಒಂದೇ, ಭೇದ-ಭಾವ ಮಾಡಬಾರದೆಂದು ಹೇಳುವುದರ ಜೊತೆಗೆ ಹಾಗೆ ನಡೆದುಕೊಂಡವರಾದರು. ಮಹಾತ್ಮಾ ಗಾಂಧೀಜಿಯವರಂತೆ ಹರಿಜನೋದ್ಧಾರ ಕಾರ್ಯ ಮಾಡಿ ತೋರಿಸಿದ್ದಾರೆ. ಇದರಿಂದಾಗಿ ಸುತ್ತ ಮುತ್ತಲಿನ ಗ್ರಾಮದ ಜನರೂ ಗೌಡರ ಬಗೆಗೆ ಗೌರವ ಹೊಂದಿದವರಾಗಿರುವರು.

'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕೂಡಲ ಸಂಗನ ಶರಣರೇ ಕುಲಜರು, ಎಂದು ಸಾರಿದ ಬಸವಣ್ಣನವರ ಅನುಯಾಯಿಗಳಾದ ಶಂಕರಶೆಟ್ಟರು ದೀನದಲಿತರನ್ನು ಸಮಾನದೃಷ್ಟಿಯಿಂದ ಕಂಡ ಪುಣ್ಯಾತ್ಮರೆನಿಸಿರುವರು. ಹೊಲೆಯ, ಮಾದಿಗ ಎನ್ನುವುದು ಅಂದು ಪ್ರತಿಯೊಂದು ಕೋಮಿಗೆ ಅಂಟಿಕೊಂಡು ಬಂದ ದಾರಿದ್ರ್ಯ, ಎಲ್ಲ ಮತ ಪಂಥಗಳಲ್ಲಿಯೂ ಅಂಥ ಜನ ಇದ್ದವರೇ. ಕೊಲ್ಲುವವನೆ ಮಾದಿಗ, ಹೊಲಸು ತಿಂಬುವವನೇ ಹೊಲೆಯ' ಎಂದ ಬಸವಣ್ಣನವರ ವಾಣಿಯಂತೆ ಗೌಡರು ಎಲ್ಲರನ್ನು ತನ್ನವರೆಂದೇ ಬಗೆದವರಾಗಿದ್ದಾರೆ.

ಕಮಲಾಪೂರದಲ್ಲಿ ಒಮ್ಮೆ ಕುಡಿಯುವ ನೀರಿನ ಕೊರತೆಯಾಗಿತ್ತು. ದಲಿತರ ಬಾವಿಯ ನೀರೂ ಬತ್ತಿತ್ತು, ಊರವರ ಬಾವಿ ಮುಟ್ಟುವಂತಿಲ್ಲ, ಆ ಸಂದರ್ಭದಲ್ಲಿ ಶಂಕರಶೆಟ್ಟರು ಮಠದ ಬಾವಿಯ ನೀರನ್ನು ತೆಗೆದುಕೊಳ್ಳುವಂತೆ ಹೇಳಿದರು. ದಲಿತರು ಧೈರ್ಯದಿಂದ ಮಠದ ಬಾವಿಯ ನೀರನ್ನು ಉಪಯೋಗಿಸತೊಡಗಿದರು.

ಅದೇ ರೀತಿ ಜಾತ್ರೆ, ಹಬ್ಬ ಮೊದಲಾದ ದಿನಗಳಲ್ಲಿ ಪ್ರದರ್ಶಿಸುತ್ತಿದ್ದ ಪ್ರದರ್ಶನ ಕಲೆಗಳಲ್ಲಿ ದಲಿತರಿಗೂ ಭಾಗವಹಿಸಲು ಅವಕಾಶ ಮಾಡಿಕೊಟ್ಟರು. ದಲಿತರು ಸತ್ತರೆ ಸವರ್ಣೀಯರ ಹೆಣಗಳನ್ನು ಊರಲ್ಲಿ ಮೆರೆಸುವಂತೆ, ದಲಿತರ ಹೆಣಗಳನ್ನೂ ಮೆರವಣಿಗೆಯಲ್ಲಿ ಕೊಂಡೊಯ್ಯಲು ಕ್ರಮ ಕೈಕೊಂಡರು. ಅಡ್ಡಬರುತ್ತಿದ್ದ ಸಂಪ್ರದಾಯಸ್ಥರಿಗೆ ತಿಳಿ ಹೇಳಿ ನಾವು ಬೇರೆ, ದಲಿತರು ಬೇರೆ ಎಂದೆನಿಸಬಾರದೆಂದು ತಿಳಿ ಹೇಳಿ ಎಲ್ಲರೂ ಕೂಡಿಬಾಳುವಂತೆ–ಬಸವಣ್ಣನವರ ಸಮಾನತೆಯನ್ನು ನಿಜ ಬದುಕಿನಲ್ಲಿ ಅಳವಡಿಸಿಕೊಂಡರು. ಬಡವರಿಗೂ ವಿಧವೆಯರಿಗೂ ದೀನ ದಲಿತರಿಗೂ ಸವರ್ಣೀಯರಿಗೆ ದೊರೆಯುತ್ತಿದ್ದ ಸೌಲಭ್ಯಗಳನ್ನು ದೊರಕಿಸಿಕೊಟ್ಟರು. ಅವರ ಮಕ್ಕಳೂ ವಿದ್ಯಾವಂತರಾಗಲು ವಿದ್ಯಾಭ್ಯಾಸ ಪಡೆಯಲು ಅನುಕೂಲ ಮಾಡಿಕೊಟ್ಟರು. ಅಂತೆಯೇ ದೊಡ್ಡ ದೊಡ್ಡ ಹುದ್ದೆಗಳಲ್ಲಿ ಅವರಿಂದು ಸೇವೆ ಸಲ್ಲಿಸುತ್ತ ಕಮಲಾಪೂರಕ್ಕೆ ಹೆಸರು ತಂದಿರುವರು. ಶ್ರೀ ಶಂಕರ ಶೆಟ್ಟರು ನ್ಯಾಯನಿಷ್ಠುರರು, ದಯಾಮಯಿಗಳು, ಧೀರ–ವೀರ ಆಗಿರುವರು.

ಶಂಕರಶೆಟ್ಟರು ಜನತೆಗೆ ಒಳ್ಳೆಯುದರ ತಿಳುವಳಿಕೆ ಮಾಡಿಕೊಡುತ್ತಿದ್ದರು. ಶ್ರಾವಣಮಾಸದಲ್ಲಿ ಮಠದಲ್ಲಿ ನಡೆಯುತ್ತಿದ್ದ ಪುರಾಣ ಪ್ರವಚನಗಳನ್ನು ಕೇಳಲು ತಪ್ಪದೆ ಹೋಗುತ್ತಲಿದ್ದರು. ಆಗಾಗ ಪೂಜ್ಯರನ್ನೂ ವಿದ್ವಾಂಸರನ್ನು ಆಮಂತ್ರಿಸಿ ಜನತೆಗೆ ಅವರಿಂದ ಉಪದೇಶದ ಮಾತುಗಳನ್ನು ಹೇಳಿಸುತ್ತಿದ್ದರು. ಶಂಕರಶೆಟ್ಟಿಯವರು ಇದ್ದುದನ್ನು ಇದ್ದಂತೆ ಹೇಳುವ ನ್ಯಾಯನಿಷ್ಠುರರಾಗಿದ್ದರು. ಭಿಡೆ, ಮುರವತ್ತಿಗೆಗೆ ಬೀಳುತ್ತಿದ್ದಿರಲಿಲ್ಲ. ಇದರಿಂದ ಅವರ ವ್ಯಕ್ತಿತ್ವಕ್ಕೆ ಕಳೆತಟ್ಟಿತು.

ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು
ಮುಗಿಲು ಹರಿದು ಬಿದ್ದರೆ
ಎನಗೆ ಮಜ್ಜನಕ್ಕೆರೆದರೆಂಬೆನು
ಗಿರಿ ಮೇಲೆ ಬಿದ್ದರೆ, ಎನಗೆ ಪುಷ್ಪವೆಂಬೆನು
ಚೆನ್ನಮಲ್ಲಿಕಾರ್ಜನಯ್ಯಾ ಶಿರಹರಿದು ಬಿದ್ದಡೆ
ಪ್ರಾಣ ನಿಮಗರ್ಪಿತವೆಂಬೆನು

– ಅಕ್ಕಮಹಾದೇವಿ

**ಆರ್ಯ ಸಮಾಜದ ಸಕ್ರಿಯ ಸದಸ್ಯರು :**

ಇತ್ತೇಹಾದ ಸಂಘಟನೆ ಒಂದು ಹುಟ್ಟಿಕೊಂಡಿತು. ನಿಜಾಮನು ಇದಕ್ಕೆ ಹೆಚ್ಚಿನ ಮಹತ್ವ ಕೊಟ್ಟನು. ಹಿಂದೂಗಳ ಹಕ್ಕು ನಾಶಗೊಳಿಸತೊಡಗಿದನು. ಹೈದ್ರಾಬಾದ ರಾಜ್ಯವನ್ನು ಇಸ್ಲಾಂ ರಾಜ್ಯವೆಂದು ಘೋಷಿಸಿದರು. ಇದಕ್ಕೆ ಪ್ರತಿಯಾಗಿ ಹಿಂದೂಗಳು ಎಚ್ಚೆತ್ತರು. ಆರ್ಯ ಸಮಾಜವೊಂದು ಹೈದ್ರಾಬಾದಿನಲ್ಲಿ ತಲೆಯೆತ್ತಿತು. ಎಲ್ಲಕಡೆಗೆ ಆರ್ಯ ಸಮಾಜದ ಅನುಯಾಯಿಗಳಾಗತೊಡಗಿದರು. ಬೀದರ, ಹುಮನಾಬಾದ, ಗುಲಬರ್ಗಾ, ರಾಯಚೂರಗಳಿಗೂ ಹಬ್ಬಿತು. ಅದೇ ರೀತಿ ಕಮಲಾಪೂರದಲ್ಲಿಯೂ ಆರ್ಯ ಸಮಾಜವೊಂದು ಸ್ಥಾಪನೆಗೊಂಡಿತು. ಶಂಕರಶೆಟ್ಟರು ಈ ಆರ್ಯಸಮಾಜದ ಸಕ್ರೀಯ ಸದಸ್ಯರಾದರು. ಹನುಮಂತ ದೇಸಾಯಿ ಈ ಆರ್ಯ ಸಮಾಜದ ಅಧ್ಯಕ್ಷರಾದರು. ಅದೇ ರೀತಿ ಹಿಂದೂ ಸಭಾ, ನಿಜಾಂ ಪ್ರಾಂತ ವೀರಶೈವ ಪರಿಷತ್ತು ಮೊದಲಾದ ಸಭೆ ಸಮಾರಂಭಗಳಲ್ಲಿ ಗೌಡರು ಭಾಗವಹಿಸುತ್ತಲಿದ್ದರು.

ನಿಜಾಮನ ಹಿಡಿತ ತಪ್ಪಿ ಇತ್ತೇಹಾದ ಸಂಸ್ಥೆಯೇ ರಾಜಕೀಯ ಆಡಳಿತ ಪಕ್ಷವಾಯಿತು. ಖಾಸೀಂ ರಜವಿಯೇ ಸೂತ್ರಧಾರನಾದನು, ಹಿಂದೂಗಳೂ ಸಂಘಟಿರಾಗತೊಡಗಿದರು. ಉಸ್ಮಾನಾಬಾದ, ಉದಗೀರ, ಚಿಟಗುಪ್ಪಾ, ಹಳ್ಳಿಖೇಡಗಳು ಆರ್ಯಸಮಾಜದ ಭದ್ರಕೋಟೆಗಳಾದವು. ನಿಜಾಂ ಪ್ರಾಂತದ ವೀರಶೈವ ಪರಿಷತ್ತು ದೊಡ್ಡ ಸಂಘಟನೆಯಾಯಿತು. ಪ್ರಭುರಾವ ಕಂಬಳಿವಾಲೆಯವರ ನೇತೃತ್ವದಲ್ಲಿ ಹೈದ್ರಾಬಾದ ಸಂಸ್ಥಾನದಲ್ಲಿ ಹಿಂದೂ ಜನರ ಸಂಘಟನೆ ಹೋರಾಟ ನಡೆಸಿದರು. ಪ್ರಭೂರಾವ ಅವರ ಜೊತೆಗೆ ಶಂಕರ ಶೆಟ್ಟರು ನಿಕಟಸಂಪರ್ಕವಿಟ್ಟುಕೊಂಡಿದ್ದರು. ಕರ್ನಾಟಕದ ಗಾಂಧಿ ಎನಿಸಿದ್ದ ಹರ್ಡೇಕರ ಮಂಜಪ್ಪನವರ ಸೇವೆಯನ್ನೂ ಸ್ಮರಿಸಲೇಬೇಕು. ಅದೇ ರೀತಿ ಕಮಲಾಪೂರ ಗಾಂಧಿ ಎನಿಸಿದ ಶಂಕರಶೆಟ್ಟರ ಹೋರಾಟವೂ ಮರೆಯದಂತಹದು.

ಈ ಭಾಗದ ಪ್ರತಿಷ್ಠಿತ ನೇತಾರರು ಆರ್ಯ ಸಮಾಜದ ಚಳುವಳಿಯಲ್ಲಿ ಸೇರಿಕೊಂಡರು. ರಜಾಕಾರರಿಗೂ ಹಿಂದೂಗಳ ನಡುವೆ ಘರ್ಷಣೆ ನಡೆಯತೊಡಗಿತು. ರಜಾಕಾರರು ಇನ್ನೂ ಅತ್ಯಾಚಾರವೆಸಗತೊಡಗಿದರು.

ನಿಜಾಮಶಾಹಿ ಜಿಂದಾಬಾದ, ಆರ್ಯಸಮಾಜ ಮುರ್ದಾಬಾದ, ಎಂದು ಹಿಂದೂಗಳು ಘೋಷಣೆ ಕೂಗತೊಡಗಿದರು. ಆರ್ಯ ಸಮಾಜದ ಸತ್ಯಾಗ್ರಹಿಗಳನ್ನು ನಿರ್ದಯವಾಗಿ ಕೊಂದು ಹಾಕತೊಡಗಿದರು. ಕಾರಾಗೃಹದಲ್ಲಿದ್ದ ಹಿಂದೂಗಳನ್ನು ಅಲ್ಲಿಯ ಮೊಗಲಾಯಿ ಪೋಲಿಸರು ಅಮಾನವೀಯತೆಯಿಂದ ವರ್ತಿಸತೊಡಗಿದರು. ಶ್ರೀ ಭೀಮಣ್ಣ ಖಂಡ್ರೆ, ದತ್ತಾತ್ರೇಯ ನರೇಂದ್ರ

ಜಿ. ಬನ್ಸಿಲಾಲ ಲಕ್ಷ್ಮಣ, ರಾಮಚಂದ್ರ ವೀರಪ್ಪ, ಹಕಿಕತ್ ರಾವ್, ಮೋಹನ ಸಿಂಗ್, ಉದಯ ಭಾನು, ಗಣಪತಿ ಶಾಸ್ತ್ರಿ, ಅನಂತ ಶರ್ಮಾ, ಗುಂಜೋಟಿ, ಬೀಡಪ್ಪ, ಮೊದಲಾದವರು ಆರ್ಯಸಮಾಜ ಚಳುವಳಿಯಲ್ಲಿ ಧುಮುಕಿದರು. ಮಹಾತ್ಮಗಾಂಧೀಜಿಯವರ ಮಾಡು ಇಲ್ಲವೆ ಮಡಿ, ತಿಲಕರ 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂಬ ಮಂತ್ರ ಪಠಿಸುತ್ತ ಹೈದ್ರಾಬಾದ ಕರ್ನಾಟಕದಲ್ಲಿ ಕಾಂಗ್ರೆಸ್ ಮುಖಂಡರಾದ ಸ್ವಾಮಿ ರಮಾನಂದತೀರ್ಥರು, ಜನಾರ್ಧನರಾವ್ ದೇಸಾಯಿ, ವಿ.ಪಿ. ದೇವುಳಗಾಂವಕರ, ಪ್ರಭೂರಾವ್ ಕಂಬಳಿವಾಲೆ, ಕೊಲ್ಲೂರ ಮಲ್ಲಪ್ಪ, ಜಗನ್ನಾಥರಾವ್ ಚಂಡ್ರಕಿ, ಚಂದ್ರಶೇಖರ ಪಾಟೀಲ್, ಶರಣಗೌಡ ಇನಾಂದಾರ, ಡಾ.ಚುರ್ಚಿಹಾಳಮಠ, ಬೀಡಪ್ಪ, ಎ ವಿ ಪಾಟೀಲ, ವೀರಭದ್ರಪ್ಪ ಶಿರೂರ, ಎಂ.ನಾಗಪ್ಪ ಮೊದಲಾದ ನೂರಾರು ಜನರು ಭಾರತ ಒಕ್ಕೂಟಕ್ಕೆ ಹೈದ್ರಾಬಾದ ಸಂಸ್ಥಾನವನ್ನು ಸೇರಿಸಲು ಪಣತೊಟ್ಟರು. ಕ್ರಿ.ಶ.೧೯೩೨ರಲ್ಲಿ ಸರದಾರ ಶರಣಗೌಡ ಇನಾಂದಾರರು ಹಾಗೂ ಕಲ್ಯಾಣಪ್ಪ ಸಜ್ಜನ ಶೆಟ್ಟರು ಗುಲಬರ್ಗಾದಲ್ಲಿ ವೀರಶೈವ ತರುಣ ಸಂಘ ಸ್ಥಾಪಿಸಿದರು.. ಕ್ರಿ.ಶ.೧೯೩೪ರಲ್ಲಿ ಮಹಾಗಾಂವದಲ್ಲಿ ಚಂದ್ರಶೇಖರ ಪಾಟೀಲರು ಶರಣಯ್ಯ ಸ್ವಾಮಿಗಳೂ ತರುಣ ಸಂಘ ಸ್ಥಾಪಿಸಿದರು.. ಕಮಲಾಪೂರದಲ್ಲಿಯೂ ಶಂಕರಶೆಟ್ಟಿ ಪಾಟೀಲರು, ಬಸಯ್ಯ ಸ್ವಾಮಿ ಕೋರವಾರ ಅವರ ಅಧ್ಯಕ್ಷತೆಯಲ್ಲಿ ವೀರಶೈವ ತರುಣಸಂಘ ಸ್ಥಾಪಿಸಿದರು.

ಕಾಸಿಂ ರಜವಿಯ ಕುತಂತ್ರದಿಂದ ಕಮಲಾಪೂರದಲ್ಲಿ ರಜಾಕಾರರು ದಬ್ಬಾಳಿಕೆ ನಡೆಸುತ್ತಲೇ ಇದ್ದರು. ಅಲ್ಲಿಯ ಮುಸಲ್ಮಾನರಲ್ಲಿ ವಿಷಬೀಜ ಬಿತ್ತತೊಡಗಿದರು. ಶಂಕರಶೆಟ್ಟಿ ಪಾಟೀಲರ ವಿರುದ್ಧ ಕತ್ತಿ ಮಸೆಯುತ್ತಲಿದ್ದರು. ಅವರನ್ನು ಮುಗಿಸಿಬಿಡಲು (ಕೊಲ್ಲಲು) ಹೊಂಚು ಹಾಕುತ್ತಲೇ ಇದ್ದರು.

ಕಮಲಾಪೂರದಲ್ಲಿ ಒಮ್ಮೆ ಶಾಂತಲಿಂಗೇಶ್ವರ ಪಲ್ಲಕ್ಕಿ ಉತ್ಸವ ನಡೆದಿತ್ತು. ಮುಸಲ್ಮಾನರು ಕಾಲುಕೆದರಿ ಜಗಳ ತೆಗೆದರು. ಹಿಂದೂಗಳ ವಿರುದ್ಧ ದಂಗೆ ಎದ್ದರು. ಸುಳ್ಳು ಸುಳ್ಳೇ ಪ್ರತಿಷ್ಠಿತರ ಮೇಲೆ ಕೇಸು ಹಾಕತೊಡಗಿದರು ಅಂದು ಗೌಡರು ಸರಕಾರಿ ಕೆಲಸಕ್ಕೆಂದು ಹೈದ್ರಾಬಾದಿಗೆ ಹೋಗಿದ್ದರು. ಅವರು ಸ್ಟೇಶನ್ ಇಳಿದ ತಕ್ಷಣ ಜನರು ಭೆಟ್ಟಿಯಾಗಿ ಕಮಲಾಪೂರದ ಘಟನೆ ಕುರಿತು ಸುದ್ದಿ ಹೇಳಿದರು. ಕೂಡಲೇ ಗೌಡರು ಕ್ರಮ ತೆಗೆದುಕೊಳ್ಳತೊಡಗಿದರು. ಹಿಂದೂ ಜನರ ಮೇಲೆ ಹಾಕ್ಕಿದ್ದ ಕೇಸುಗಳನ್ನು ತೆರವುಗೊಳಿಸಿದರು. ಬಂಧಿತರಾಗಿದ್ದ ಹಿಂದೂಗಳನ್ನು ಬೇಲ್ ಮೇಲೆ ಬಿಡಿಸಿದರು. ಹಿಂದೂ ಜನರ ವಿರುದ್ಧ ಏನೆಲ್ಲ ಹೇಯಕೃತ್ಯ ಎಸಗಲು ಮುಸ್ಲೀಂರು ಹಿಂಜರಿಯುತ್ತಿದ್ದಿರಲಿಲ್ಲ. ಶ್ರೀಶಂಕರಶೆಟ್ಟಿ ಪಾಟೀಲರು ಊರಲ್ಲಿಲ್ಲದಿದ್ದರೂ ಅವರ ವಿರುದ್ಧ ಕೂಡ ಎಫ್.ಆಯ್.ಆ್. ಕೇಸ ಹಾಕಿದ್ದು ಅವರ ನೀಚತನದ ಪರಮಾವಧಿಯಾಗಿದೆ. ಗೌಡರು ಹೈದ್ರಾಬಾದಕ್ಕೆ ಹೋದದ್ದು ಸರಕಾರೀ ಕೆಲಸದ

ನಿಮಿತ್ತವೇ ಇತ್ತು. ಅಲ್ಲಿ ಅವರ ಹಾಜರಾತಿ ಕೂಡ ಇತ್ತು. ಅವರ ವಿರುದ್ಧ ಏನೂ ಮಾಡಲು ಸಾಧ್ಯವಿರದ ಮಾತು. ಆದರೂ ಸುಳ್ಳ ಸುಳ್ಳೆ ಕೇಸು ಸೃಷ್ಟಿಮಾಡಿ, ಗೌಡರ, ಹಿಂದೂಗಳ ಮನ ನೋಯಿಸುವಂತಹ ದುಷ್ಟತನಕ್ಕಿಳಿಯುತ್ತಲೇ ಇದ್ದರು.

**ಕೋಮು ಸೌಹಾರ್ದತೆ ಮೆರೆದ ಗೌಡರು :**

ಕಮಲಾಪೂರ ಗ್ರಾಮದಲ್ಲಿ ಎಲ್ಲ ಜಾತಿ ಜನಾಂಗದ ಜನರು ವಾಸಮಾಡಿಕೊಂಡಿರುವರು. ಲಿಂಗಾಯಿತರಂತೆ ಮುಸಲ್ಮಾನರೂ ಸೌಹಾರ್ದದಿಂದ ಬದುಕು ಸಾಗಿಸುತ್ತಲಿರುವರು. ಹಿಂದೂ ಜನರ ದೇವಾಲಯಗಳಂತೆ ಪಕ್ಕದಲ್ಲಿ ಮುಸಲ್ಮಾನರ ಹಜರತ್ ದಾವುಲ್ ಮಲಿಕ್ ದರ್ಗಾ ಇರುವುದು. ದೇಶಕ್ಕೆ ಸ್ವಾತಂತ್ರ್ಯ ದೊರೆತರೂ ಹೈದ್ರಾಬಾದ ನಿಜಾಮನ ಹಟಮಾರಿತನದಿಂದಾಗಿ ನಿಜಾಮ ಸಂಸ್ಥಾನ ಸ್ವತಂತ್ರವಾಗಿ ಉಳಿಯಿತು. ಕಾಸಿಂ ರಜವಿಯ ಕುಚೋದ್ಯತನದಿಂದಾಗಿ, ರಜಾಕಾರರ ಹಾವಳಿಯಿಂದಾಗಿ ಮುಸಲ್ಮಾನರು ಹಿಂದೂಗಳ ಮೇಲೆ ದಬ್ಬಾಳಿಕೆ ನಡೆಸತೊಡಗಿದರು. ಕೊಲೆ, ಸುಲಿಗೆ, ಮಾನಹರಣ ಮೊದಲಾದ ಹೀನಕೃತ್ಯಗಳಿಗೂ ಇಳಿದಾಗ ಹಿಂದೂಗಳು ರೊಚ್ಚಿಗೆದ್ದರು. ಹಿಂದೂ ಮುಸಲ್ಮಾನರಲ್ಲಿ ಹೊಡೆದಾಟ ಪ್ರಾರಂಭವಾಯಿತು. ಮುಸ್ಲೀಂ ಸಹಜೀವನವೂ ಅಸ್ತವ್ಯಸ್ತಗೊಂಡಿತು. ದರ್ಗಾ ಧ್ವಂಸಗೊಂಡಿತು. ಇದನ್ನು ಗಮನಿಸಿದ ಶಂಕರಶೆಟ್ಟರು ಕೂಡಲೇ ಅದನ್ನು ರಿಪೇರಿ ಮಾಡಿಸಿದರು. ಪೋಲಿಸ ಅಧಿಕಾರಿಗಳು ಇದನ್ನು ತಿಳಿದು ಗೌಡರ ಉದಾತ್ತಗುಣವನ್ನು ಕೋಮು ಸೌಹಾರ್ದತೆಯನ್ನು ಮೆಚ್ಚಿಕೊಂಡು ಮೇಲಾಧಿಕಾರಿಗಳಿಗೆ ತಿಳಿಸಿದರು.

**ಶಿಷ್ಟ ರಕ್ಷಣೆ, ದುಷ್ಟ ನಿಗ್ರಹದ ಗೌಡರು :**

ಶಂಕರಶೆಟ್ಟಿ ಪಾಟೀಲರು ದಯಾಮಯಿಗಳು. ದಯವೇ ಧರ್ಮದ ಮೂಲ ಎಂದು ಬಸವಣ್ಣನವರ ಅಮೃತವಾಣಿಯನ್ನು ಬಲವಾಗಿ ನಂಬಿದವರು. ಸತ್ಯಾಸತ್ಯಗಳ ನ್ಯಾಯ ಅನ್ಯಾಯಗಳ ಬೆಲೆ ಕಟ್ಟುವಂಥವರು. ಇದ್ದದ್ದನ್ನು ಇದ್ದಂತೆ ಹೇಳುವ ನ್ಯಾಯನಿಷ್ಠುರರು. ಸರಳಸಜ್ಜನಿಕೆಗೆ ಹೆಸರಾಗಿರುವ ಶ್ರೀ ಶಂಕರ ಶೆಟ್ಟರು ಸದುವಿನಯವೇ ಸದಾಶಿವನ ಒಲುಮೆ ಎಂದುಕೊಂಡವರು. ಶಿಷ್ಟ ರಕ್ಷಕರಿವರು. ದುಷ್ಟರು ಗೌಡರ ಸುತ್ತ ಎಂದೂ ಸುಳಿಯರು. ಗ್ರಾಮಾಭಿವೃದ್ಧಿಯೇ, ಗ್ರಾಮದ ಜನತೆಯ ಸರ್ವತೋಮುಖದ ಏಳ್ಗೆಯೇ ಇವರ ಧ್ಯೇಯ. ನ್ಯಾಯತ್ವದಿಂದ ಬೇರೆಡೆಗೆ ಎಂದೂ ಚಲಿಸರು. ಸದ್ಗುಣ ಸಂಪತ್ತಿಗೆ ವಾಲಿದವರು. ಮನೆಯ ಆಗು ಹೋಗುಗಳ ಕಡೆಗೆ ಇವರೆಂದೂ ಸುಳಿದವರಲ್ಲ. ಅದನ್ನು ತಮ್ಮ ಧರ್ಮ ಪತ್ನಿಯವರಿಗೆ ವಹಿಸಿಕೊಟ್ಟಿದ್ದರು. ಸೌ.ರಂಗಮ್ಮ ಗೌಡತಿಯವರು ವಿಶೇಷ ಆಸಕ್ತಿ ತಾಳಿ ಹೊಲಮನೆಯ ಎಲ್ಲ ಕೆಲಸವನ್ನು ಚೆನ್ನಾಗಿ ನೋಡಿಕೊಂಡು ಹೋಗುತ್ತಲಿದ್ದರು. ಅಂತೆಯೆ ಸಮಾಜಸೇವೆಗಾಗಿ ಗೌಡರು ತಮ್ಮ ಸೇವೆಯನ್ನು ಮುಡುಪಿಟ್ಟವರಾದರು.

## ಕಾಂಗ್ರೆಸ್ ಸಂಸ್ಥೆಯ ಕಾರ್ಯಕರ್ತರಾಗಿ ಗೌಡರು :

ರಾಷ್ಟ್ರೀಯ ಕಾಂಗ್ರೆಸ್‌ನೊಂದಿಗೆ ಸತತ ಸಂಪರ್ಕವಿಟ್ಟುಕೊಂಡಿದ್ದ ಸ್ವಾಮಿ ರಮಾನಂದ ತೀರ್ಥರು, ಹೈದ್ರಾಬಾದ ರಾಜ್ಯ ಕಾಂಗ್ರೆಸ್ ರಚಿಸಲು ಮಹಾತ್ಮಾಗಾಂಧೀಜಿಯವರಿಂದ ಅನುಮತಿ ಪಡೆದುಕೊಂಡರು. ಆದರೆ ಇದೊಂದು ಕೋಮುವಾದಿ ಪಕ್ಷ ಎಂದು ಹೆಸರಿಸಿ ನಿಜಾಮರಾಜನ ಪ್ರಧಾನಿ ನಿಷೇಧಿಸಿದರು. ಧೈರ್ಯಗುಂದದೆ ಸ್ವಾಮಿ ರಮಾನಂದ ತೀರ್ಥರು ಸಂಸ್ಥಾನದ ಆಗುಹೋಗುಗಳ ಕುರಿತು ಮೇಲಿಂದ ಮೇಲೆ ವಿಷಯ ತಿಳಿಸುತ್ತಲೇ ಇದ್ದರು. ಈ ರಾಜ್ಯದಲ್ಲಿ ಸಾವಿರಾರು ರಾಜ್ಯ ಕಾಂಗ್ರೆಸ್ ಕಾರ್ಯಕರ್ತರು ಆರ್ಯ ಸಮಾಜದ ಮುಖಂಡರಾಗಿದ್ದ ಮಂಗಲದೇವ ಮತ್ತು ರಾಮಚಂದ್ರ ಮೊದಲಾದವರು ಬೀದರ, ಗುಲಬರ್ಗಾ ರಾಯಚೂರ ಜಿಲ್ಲೆಗಳಲ್ಲಿಯ ಹಿಂದೂ ಜನರಿಗೆ ಒಗ್ಗಟ್ಟಿನಿಂದ ಇರಲು ಉದ್ಬೋಧಕ ಭಾಷಣ ಮಾಡುತ್ತಲಿದ್ದರು. ಕ್ರಿ.ಶ.೧೯೩೦ರಿಂದ ೧೯೩೮ರ ಅವಧಿಯಲ್ಲಿ ಮುಸ್ಲಿಂರು ಕುರಾನ್ ವಿರುದ್ಧ ಬೋಧೆ ಮಾಡುತ್ತ, ಮುಸಲ್ಮಾನರನ್ನು ತಪ್ಪುದಾರಿಗೆಳೆಯುತ್ತಲೆ ಇದ್ದಾರೆ.. ಆಧಾರಸಹಿತ ಜನತೆಗೆ ತಿಳಿಯಪಡಿಸಿದರು. ರಜಾಕಾರರು ಜಿಹಾದ ಹೆಸರನ್ನು ತಪ್ಪು ಅರ್ಥದಲ್ಲಿ ಬಳಸುತ್ತಿದ್ದಾರೆಂದು ಬೋಧಿಸಿದರು. ಜಿಹಾದ ಎಂಬುದಕ್ಕೆ ಧರ್ಮಯುದ್ಧ ಎಂದರ್ಥ. ಅತ್ಯಾಚಾರದ ವಿರುದ್ಧ ಮಾಡುವಂಥ ಹೋರಾಟ ಆದಾಗಿದೆ. ಆದರೆ ಕಾಸೀಂ ರಜವಿಯು ಅಮಾಯಕ ಹಿಂದೂಗಳ ಮೇಲೆ ಅತ್ಯಾಚಾರ ಎಸಗಲು ಮುಸಲ್ಮಾನರಿಗೆ ಬೋಧಿಸುತ್ತಲಿರುವುದು ಕುರಾನಕ್ಕೆ ಅಪಮಾನ ಎಂದು ಆರ್ಯ ಸಮಾಜದ ಮುಖಂಡರು ಬೋಧಿಸತೊಡಗಿದರು. ಕಾಂಗ್ರೆಸ್ ಮುಖಂಡರೂ ಸಿಡಿದೆದ್ದರು. ಹಳ್ಳಿಹಳ್ಳಿಯ ಜನರೂ ಮುಸಲ್ಮಾನರ ವಿರುದ್ಧ ಹೋರಾಡಲು ಸನ್ನದ್ಧರಾದರು. ನಿಜಾಮನ ಪ್ರಧಾನಿ ಸರ್ ಇಸ್ಮಾಯಿಲ್ ಅವರು ೧೯೪೬ರಲ್ಲಿ ಕಾಂಗ್ರೆಸ್ ಮೇಲಿದ್ದ ನಿಷೇಧವನ್ನು ರದ್ದುಪಡಿಸಿದರು. ತಾವು ಮಾಡುತ್ತಿರುವುದು ತಪ್ಪು ಎಂದು ಗೊತ್ತಿದ್ದರೂ ನಿಜಾಮನನ್ನು ತಪ್ಪುದಾರಿಗೆಳೆಯುತ್ತ ಬಂದಿದ್ದ ಕಾಸಿಂ ರಜವಿಯ ದೆಹಲಿಯನ್ನು ವಶಪಡಿಸಿಕೊಳ್ಳುವ ಹುಚ್ಚು ಸಾಹಸ, ನೆಲಕಚ್ಚಿತು.

## ಪ್ರಚಾರರತ್ನ ಪ್ರಶಸ್ತಿ:

ರಜಾಕಾರರ ವಿರುದ್ಧ ಪ್ರಚಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಹಿರಿಯ ಕಾರ್ಯಕರ್ತರಲ್ಲಿ ಶಂಕರಶೆಟ್ಟಿ ಪಾಟೀಲರು ಮುಂಚೂಣಿಯಲ್ಲಿದ್ದರು. ನಿಜಾಮ ಕರ್ನಾಟಕ ಪರಿಷತ್ತಿನ ಮೂಲಕ ೧೯೩೭ರಲ್ಲಿ ರಾಯಚೂರಿನಲ್ಲಿಯೂ, ೧೯೪೪ರಲ್ಲಿ ಕಕ್ಕೇರಿಯಲ್ಲಿಯೂ ಸಭೆ ಜರುಗಿದವು. ಇಲ್ಲಿ ಅಪತ್ರಿಮ ಸೇವೆ ಸಲ್ಲಿಸಿದ ಕಾರ್ಯಕರ್ತರನ್ನು ಗುರುತಿಸಿ ೧೯೪೬ರಲ್ಲಿ ಜಹಿರಾಬಾದದಲ್ಲಿ ಜರುಗಿದ ನಿಜಾಮ ಪ್ರಾಂತೀಯ ವೀರಶೈವ ಪರಿಷತ್ತಿನಲ್ಲಿ ಶಂಕರಶೆಟ್ಟಿ ಪಾಟೀಲರಿಗೆ ಪ್ರಚಾರರತ್ನ ಪ್ರಶಸ್ತಿ ಪತ್ರ ನೀಡಿ ಸನ್ಮಾನಿಸಿದರು.

## ಗಡಿಶಿಬಿರಗಳಿಗೆ ಚಾಲನೆ :

ಕಾಸಿಂ ರಜವಿಯು ನಿಜಾಮನರಾಜ್ಯದಲ್ಲಿ ಸುಮಾರು ಎರಡು ಸಾವಿರ ರಜಾಕಾರರಿಗೆ ತರಬೇತಿ ನೀಡಿದ್ದನು. ರಜಾಕಾರರ ಐವತ್ತೆರಡು ಮಿಲಿಟ್ರಿ ಕೇಂದ್ರಗಳನ್ನು ಸ್ಥಾಪಿಸಿದ್ದನು. ಹಿಂದೂಗಳನ್ನು ಕಂಡಲ್ಲಿ ಕಾಟೊ ಲೂಟೊ ಬಾಟೊ ಎಂದಂದು ಕಂಡಲ್ಲಿ ಕೊಲ್ಲಿರಿ, ರಕ್ತ ಮಾಂಸ ಹೀರಿ. ಆಸ್ತಿ, ಪಾಸ್ತಿ ನಿಮ್ಮಲ್ಲಿ ಹಂಚಿಕೊಳ್ಳಿರಿ. ಮುಸಲ್ಮಾನ ರಾಜ್ಯ ಸ್ಥಾಪಿಸಿರಿ ಎಂದು ಮುಸಲ್ಮಾನರಿಗೆ ಕರೆಕೊಟ್ಟನು. ಆಗ ಹಿಂದೂ ಜನರು ಇನ್ನೂ ರೊಚ್ಚಿಗೆದ್ದರು. ಬೀದಿಗಿಳಿದರು. ಮುಸಲ್ಮಾನರೂ ರಜಾಕಾರರನ್ನು ಮುಂದೆ ಮಾಡಿ ಹಿಂದೂಗಳನ್ನು ಕೊಲ್ಲತೊಡಗಿದರು. ಅವರ ದನಕರುಗಳನ್ನು ಕಡಿದು ತಿನ್ನತೊಡಗಿದರು. ಹೆಣ್ಣುಮಕ್ಕಳ ಮಾನ ಮರ್ಯಾದೆ ಕಳೆಯಹತ್ತಿದರು. ಇದಕ್ಕೆ ರೋಷಿಹೋದ ಹಿಂದೂಗಳು ಗಡಿದಂಡೆಗೆ ಹೋಗಿ ತಮ್ಮ ಪ್ರಾಣ ಉಳಿಸಿಕೊಳ್ಳತೊಡಗಿದರು. ಗದುಗಿನಲ್ಲಿ ಕಾಂಗ್ರೆಸ್ ನಾಯಕರು ಸಭೆ ಸೇರಿ ನಿಜಾಮನ ವಿರುದ್ಧ ಹೋರಾಟಕ್ಕೆ ಸನ್ನದ್ಧರಾದರು. ಅಂದಾನೆಪ್ಪ ದೊಡ್ಡಮೇಟಿಯವರು ಈ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಜನಾರ್ಧನರಾವ ದೇಸಾಯಿಯವರ ನೇತೃತ್ವದಲ್ಲಿ ಇದು ನಡೆದಿತ್ತು. ಇದರಲ್ಲಿ ಎಸ್.ನಿಜಲಿಂಗಪ್ಪ, ಬಿ.ಜಿ.ಖೇರ, ಅಂಬಲಿ ಚನ್ನಬಸಪ್ಪ, ಹಳ್ಳಿಕೇರಿ ಗುದ್ಲೆಪ್ಪ, ಜಯದೇವಿ ತಾಯಿ ಲಿಗಾಡೆ, ಚನ್ನಪ್ಪ ವಾಲಿ, ಶಾಂತಿನಾಥ ಇಂಗಳೆ, ಎಸ್.ಆರ್.ಕಂಠಿ ಮೊದಲಾದ ನೇತಾರರು ಭಾಗವಹಿಸಿದ್ದರು. ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ರಜಾಕಾರರನ್ನು ಶಸ್ತ್ರಾಸ್ತ್ರಗಳಿಂದಲೇ ಹೋರಾಡಲು ಸಿದ್ಧತೆ ನಡೆಸಿದರು. ಬಾಂಬು ತಯಾರಿಸುವವರನ್ನು ಕರೆತರುತ್ತೇನೆ ಎಂದು ಸಂಪಗಾವಿಯ ವಾಲಿ ಚನ್ನಪ್ಪನವರು ಗುಡುಗಿದರು. ಗಡಿಶಿಬಿರಗಳ ಸ್ಥಾಪನೆಗೆ ಇದರಿಂದ ಹೆಚ್ಚಿನ ಚಾಲನೆ ದೊರೆತಂತಾಯಿತು. ನೂರಾರು ಗಡಿ ಶಿಬಿರಗಳನ್ನು ತೆರೆದರು.

## ಗುಲಬರ್ಗಾ ಜಿಲ್ಲೆ ಗಡಿಶಿಬಿರಗಳು:

ಗುಲಬರ್ಗಾಜಿಲ್ಲಾ ಗಡಿ ಶಿಬಿರಗಳು ವಿಜಾಪೂರ, ಸೊಲ್ಲಾಪುರ ಜಿಲ್ಲೆಗಳಲ್ಲಿಯೂ ಸ್ಥಾಪನೆಗೊಂಡವು. ಸಿಂದಗಿ, ದುಧನಿ, ಕೆಸರ ಜವಳಗಾ, ವಾಗ್ಧರಿ, ಮೈಂದರಗಿಗಳಲ್ಲಿಯೂ ತೆರೆದರು. ಸಿಂದಗಿಯ ಶಿಬಿರಾರ್ಥಿಪತಿಯಾಗಿ ಸರದಾರ ಶರಣಗೌಡ ಇನಾಮದಾರ, ದುಧನಿಗೆ ಗುರುಭೀಮರಾವ ಪಾಟೀಲರೂ, ಗೌಡಗಾಂವಕ್ಕೆ ಧರ್ಮವೀರ ನೆಲೋಗಿಯವರು, ಮಾದನಹಿಪ್ಪರಗಾಕ್ಕೆ ಸಾಹಿಬಣ್ಣಾ, ವಾಗ್ಧರಿಗೆ ಅಣ್ಣಾರಾವ ವ್ಹಿ. ಪಾಟೀಲರೂ, ಮೈಂದರ್ಗಿಗೆ ಹಕಿಕತರಾವ್‌ರೂ, ಕೆಸರಜವಳಗಿಗೆ ದಿಗಂಬರರಾವ ಕಲಮಣಕರರೂ, ತಾಳಿಕೋಟಿಗೆ ಬ್ಯಾರಿಷ್ಟರ್ ರಾಜಾ ವೆಂಕಟಪ್ಪ ಅವರೂ ಕೆಲಸ ನಿರ್ವಹಿಸುತ್ತಲಿದ್ದರು. ಶಂಕರಶೆಟ್ಟಿ ಪಾಟೀಲರು ಎ.ವ್ಹಿ.ಪಾಟೀಲರೊಂದಿಗೆ ವಾಗ್ಧರಿ ಗಡಿ ಶಿಬಿರದಲ್ಲಿ ಭಾಗವಹಿಸಿದ್ದರು.

## ಗೌಡರಿಗೆ ಗುಂಡೇಟು :

ಶಂಕರಶೆಟ್ಟಿ ಕಮಲಾಪೂರದ ಮನೆಯಲ್ಲಿ ಇದ್ದರು. ಅಲ್ಲಿಂದ ಶಿಬಿರಾರ್ಥಿಗಳಿಗೆ ಬಟ್ಟೆ ಆಹಾರ, ಶಸ್ತ್ರಾಸ್ತ್ರ ಕಳಿಸಿಕೊಡುತ್ತಿದ್ದರು. ಜೊತೆಗೆ ಗೌಡಕಿ ಕೆಲಸವನ್ನೂ ನೋಡಿಕೊಳ್ಳುತ್ತಲಿದ್ದರು. ರಾತ್ರೋರಾತ್ರಿ ಯಾರಿಗೂ ತಿಳಿಯದಂತೆ ಶಿಬಿರಕ್ಕೆ ಹೋಗಿ ಬರುತ್ತಲಿದ್ದರು. ಹೋರಾಟದ ಕೆಲಸಕಾರ್ಯಗಳನ್ನು ನೋಡುತ್ತಲೇ ಇದ್ದರು. ಅನೀತಿ ಅತ್ಯಾಚಾರದ ವಿರುದ್ಧ ಹೋರಾಟ ನಡೆಸುತ್ತಲಿದ್ದರು. ದಿ ೧೯-೫-೧೯೪೮ರಂದು ನಿಜಾಂ ಸರಕಾರದ ಪರವಾಗಿ ಊರಲ್ಲಿ ಶಾಂತಿ ಸಭೆ ನಡೆಸಲು ತೀರ್ಮಾನಿಸಿ ಅಸಿ. ಕಮಿಶ್ನರ್ ಮತ್ತು ತಹಶೀಲ್ದಾರ ನೇತೃತ್ವದಲ್ಲಿ ಸಭೆ ನಡೆದಿತ್ತು. ಗಡಿಭಾಗದಿಂದ ನಿರಾಶ್ರಿತರಾಗಿ ಬಂದ ಮುಸ್ಲೀಂರನ್ನು ಕಾಪಾಡುವುದು ಸಭೆಯ ವಿಷಯವಾಗಿತ್ತು. ಶಂಕರಶೆಟ್ಟಿಯವರು ಈ ಸಭೆಯಲ್ಲಿ ಖಾರವಾಗಿಯೆ ಗುಡುಗಿದರು. ಹಿಂದೂ ಮುಸಲ್ಮಾನರು ಸದಾಕಾಲವೂ ಒಂದಾಗಿ ಬಾಳಬೇಕು. ಹಿಂದೂ ಮುಸಲ್ಮಾನರೆಲ್ಲರೂ ಇದನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಇದಕ್ಕೆ ಮೀರಿ ಯಾರೇ ಗುಂಡಾಗರ್ದಿಗಿಳಿದರೆ ಅಂಥವರನ್ನು ಗುರುತಿಸಿ ಅವರಿಗೆ ತಕ್ಕ ಶಿಕ್ಷೆ ವಿಧಿಸಬೇಕೆಂದರು. ಹಿಂದೂ ಗುಂಡಾ ಜನರನ್ನು ನಾನು ತಂದುಕೊಡುವೆ, ಮುಸಲ್ಮಾನರಲ್ಲಿಯ ಗುಂಡಾ ಜನರನ್ನು ಮುಸಲ್ಮಾನ ಮುಖಂಡರು ಗುರುತಿಸಬೇಕು. ಅವರನ್ನು ಸರಕಾರ ನಿಯಂತ್ರಿಸಬೇಕೆಂದು ತಿಳಿಸಿದರು. ಅಂದಾಗ ಶಾಂತಿ ನೆಲೆಸುತ್ತದೆಂದರು.

ಇದು ಮುಸಲ್ಮಾನ ಮುಖಂಡರಿಗೆ ಹಿಡಿಸಲಿಲ್ಲ. ಅವರು ರೊಚ್ಚಿಗೆದ್ದರು. ದುಷ್ಟ ಗುಂಡಾ ರಜಾಕಾರರು ಈ ಸುದ್ದಿ ತಿಳಿದು ಗೌಡರನ್ನು ಕೊಲೆ ಮಾಡಲು ಯೋಚಿಸತೊಡಗಿದರು. ಅಂದೇ ಸಾಯಂಕಾಲದೊಳಗಾಗಿ ಶಂಕರ ಶೆಟ್ಟರನ್ನು ಕೊಲ್ಲಲು ಹೊಂಚುಹಾಕಿದರು.

ಅಸಿ. ಕಮಿಶ್ನರ್‌ರಾಗಿದ್ದ ಆಲೂರ ಬಸಪ್ಪನವರನ್ನು ಮತ್ತು ತಹಶೀಲ್ದಾರ ಮೊದಲಾದ ಅಧಿಕಾರಿಗಳನ್ನು ಸಾಯಂಕಾಲ ಐದುಗಂಟೆಗೆ ಬಸ್ ಸ್ಟ್ಯಾಂಡಿಗೆ ಗೌಡರು ಕಳಿಸಲು ಹೋಗಿದ್ದರು. ಕಳಿಸಿ ತಿರುಗಿ ಬರುವಾಗ ಮೋಹಮದ ಇಸ್ಮಾಯಿಲ್ ಎಂಬವನು ಗುಂಡು ಹಾರಿಸಿದನು. ಗೌಡರ ಎದೆಗೆ ಗುರಿ ಇಟ್ಟಿದ್ದರೂ ಅದು ಎಡಭುಜಕ್ಕೆ ತಗಲಿತು. ಎದೆಗೆ ಛರ್‍ರಾ ಸಿಡಿದಿದ್ದವು. ಇದನ್ನು ಕೇಳಿದ ಅಧಿಕಾರಿಗಳು ಗುಲಬರ್ಗಾದಿಂದ ಕೂಡಲೇ ಬಂದರು. ಅಲ್ಲಿಂದ ಮಹಾಗಾಂವದ ಮೂಲಕ ಪೋಲಿಸ ಅಧಿಕಾರಿಯನ್ನು ಕರೆದುಕೊಂಡು ಜಾಗದ ಪತ್ರ ಸಿದ್ಧಪಡಿಸಿ, ಗುಲಬರ್ಗಾದ ಸರಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅಲ್ಲಿ ಗುಂಡು ಮತ್ತು ಛರ್‍ರಾ ಹೊರಕ್ಕೆ ತೆಗೆದು ಔಷಧೋಪಚಾರ ಮಾಡಿಸಿದರು. ಗೌಡರ ಪ್ರಾಣಕ್ಕೆ ಯಾವ ಅಪಾಯ ತಟ್ಟಿರಲಿಲ್ಲ. ರಜಾಕಾರರು ಗೌಡರನ್ನು ಹುಡುಕಿಕೊಂಡು ದವಾಖಾನೆಗೆ ಬರಬಹುದೆಂದು ರಾತ್ರೋರಾತ್ರಿ ಗೌಡರನ್ನು ಅಲ್ಲಿಂದ ಸೊಲ್ಲಾಪೂರ ಆಸ್ಪತ್ರೆಗೆ ಕರೆದುಕೊಂಡು

ಹೋದರು. ಗೌಡರ ಸ್ನೇಹಿತ ಮಹಾಗಾಂವದ ರುದ್ರಗೌಡ ಪಾಟೀಲರ ಪಾತ್ರ ಈ ವಿಷಯದಲ್ಲಿ ಪ್ರಮುಖವಾಗಿತ್ತು.

ಸೊಲ್ಲಾಪೂರ ಆಸ್ಪತ್ರೆಯಲ್ಲಿ ಗೌಡರು ಆರೈಕೆ ಪಡೆಯುತ್ತಿದ್ದಾಗ ಅವರನ್ನು ಕಾಣಲು, ಕಂಡು ಸಾಂತ್ವನ ಹೇಳಲು, ಸಹಾನುಭೂತಿ ತೋರಿಸಲು ಜನತೆ ಸಾಲುಗಟ್ಟಲೆ ಬರುತ್ತಿದ್ದರು. ನಾಡಿನ ಹಲವಾರು ಮುಖಂಡರು, ಆಪ್ತೇಷ್ಟರು, ಸ್ನೇಹಿತರು, ಬಂದು ಬಂದು ಸಾಂತ್ವನ ಹೇಳಿಹೋಗುತ್ತಲಿದ್ದರು. ಸೊಲಾಪೂರ ಮಹಾನಗರ ಸಭೆಯ ಅಧ್ಯಕ್ಷರಾಗಿದ್ದ ಸಿದ್ರಾಮಪ್ಪ ಉಮರಜಿಯವರು, ನೂರೊಂದಪ್ಪ ಬಮ್ಮಾಣ, ಗುರುಪಾದಪ್ಪ ಚಿಗ್ಗೋಣ, ಪಾಂಡುರಂಗ ಶೇರಿಗಾರ, ಗೋಪಾಲರಾವ ಮುಡಬಿ, ಹನುಮಂತರಾವ ಕಕ್ಕೇರಿ, ಧರ್ಮರಾವ ಅಫಜಲಪೂರ್, ಶಂಕರ ಹಕಿಕತರಾವ ಚಿಡಗುಪ್ಪಿಕರ, ಚಂದ್ರಶೇಖರ ಪಾಟೀಲ, ಗಂಗಾಧರ ನಮೋಶಿ, ಅಣ್ಣಪ್ಪಣ್ಣ ನಮೋಶಿ, ಅಲ್ಲದೆ ಮನೆಯ ಮಂದಿಯೆಲ್ಲ, ಆಪ್ತೇಷ್ಟರು ಗೌಡರನ್ನು ಕಂಡವರಲ್ಲಿ ಪ್ರಮುಖರಾದರಾಗಿದ್ದಾರೆ.

ಗುಣಮುಖರಾದ ಗೌಡರು ಮರುಹುಟ್ಟು ಪಡೆದು ತಿರುಗಿ ಕಮಲಾಪೂರಕ್ಕೆ ಬಂದರು. ಆಸ್ಪತ್ರೆಯಿಂದ ಬಂದ ಗೌಡರು, ಸುಮ್ಮನೆ ಕೂಡ್ರಲಿಲ್ಲ. ದಾನಿಗಳ ಹತ್ತಿರ ಮನೆ ಮನೆ ತಿರುಗಿ ಮತ್ತೆ ಹಣ ಸಂಗ್ರಹಿಸತೊಡಗಿದರು. ಅದನ್ನು ಶಿಬಿರಾರ್ಥಿಗಳಿಗೆ ಖರ್ಚಿಗೆಂದು ಕಳಿಸತೊಡಗಿದರು. ಮನೆಯವರನ್ನೆಲ್ಲ ಸೊಲ್ಲಾಪೂರಕ್ಕೆ ಕಳಿಸಿಕೊಟ್ಟಿದ್ದರು. ಆಳುಮನುಷ್ಯರಿಂದ ಅಡಿಗೆ ಮಾಡಿಸಿ ಶಿಬಿರಾರ್ಥಿಗಳಿಗೆ ಕಳಿಸಿಕೊಡುತ್ತಲಿದ್ದರು. ಜೊತೆಗೆ ಬಟ್ಟೆ ಬರೆ ಹೊದಿಕೆ ಮತ್ತು ಶಸ್ತ್ರಾಸ್ತ್ರಗಳನ್ನು ಕಳಿಸುತ್ತಲಿದ್ದರು. ಇದು ಅವ್ಯಾಹತವಾಗಿ ನಡೆಯುತ್ತಲೇ ಇತ್ತು. ಹಣ ಕೂಡದಾದಾಗ ಸ್ವಂತ ಹಣ ತೆಗೆದು ಕಳಿಸಿ ಕೊಡುತ್ತಲಿದ್ದರು.

**ಮುಂಬೈ ಎ.ಐ.ಸಿ.ಸಿ ಅಧಿವೇಶನ :**

ಮುಂಬೈಯಲ್ಲಿ ಎ.ಐ.ಸಿ.ಸಿ ಅಧಿವೇಶನವೊಂದು ದಿ:೨೦-೫-೧೯೪೮ರಂದು ನಡೆದಾಗ ಹೈದ್ರಾಬಾದ ಸಂಸ್ಥಾನದ ಮೇಲೆ ಕಾರ್ಯಾಚರಣೆ ನಡೆಸಲು ಮುಖಂಡರು ಒಮ್ಮತದ ನಿರ್ಣಯವೊಂದನ್ನು ಸ್ವೀಕರಿಸಿದರು. ಈ ಅಧಿವೇಶನದ ಕೆ.ಪಿ.ಸಿ.ಸಿ. ಅಧ್ಯಕ್ಷ ಶ್ರೀಎಸ್.ನಿಜಲಿಂಗಪ್ಪನವರ, ಮುಖ್ಯಮಂತ್ರಿ ಬಿ.ಜಿ.ಖೇರ, ಸ್ವಾಮಿ ರಮಾನಂದತೀರ್ಥ, ಡಾ.ಜಿ.ಎಸ್.ಮೇಲುಕೋಟೆ ಮೊದಲಾದವರು ನಿಜಾಂ ಸಂಸ್ಥಾನದ ಅರಾಜಕತೆಯ ಹೇಯಕೃತ್ಯದ ವಿವರಣೆಯನ್ನು ನೀಡಿದ್ದು ಹೃದಯ ಸ್ಪರ್ಶಿಯಾಗಿತ್ತು. ಈ ಅವ್ಯವಸ್ಥೆಯ, ಅರಾಜಕತೆಯ ಹಿಂಸೆಯನ್ನು ಹೋಗಲಾಡಿಸಲು ಭಾರತ ಸರಕಾರ ತತ್‌ಕ್ಷಣ ಕ್ರಮ ಕೈಕೊಳ್ಳಬೇಕೆಂದು ಪ್ರಧಾನಿ ಪಂಡಿತ ಜವಾಹರಲಾಲ ನೆಹರೂ ಮತ್ತು ಉಪಪ್ರಧಾನಿ ಹಾಗೂ

ಗೃಹಮಂತ್ರಿಗಳೂ ಆಗಿದ್ದ ಸರದಾರ ವಲ್ಲಭಭಾಯಿ ಪಟೇಲ್ ಮೊದಲಾದವರನ್ನು ಒತ್ತಾಯಪೂರ್ವಕವಾಗಿ ಬಿನ್ನವಿಸಿಕೊಂಡರು. ಸರಕಾರದ ಮನ ಕರಗಿತು. ಕೂಡಲೇ ಕ್ರಮ ತೆಗೆದುಕೊಳ್ಳಲು ಸಿದ್ಧರಾದರು.

ಹೈದ್ರಾಬಾದ ರಾಜ್ಯದ ಗಡಿ ಶಿಬಿರಗಳಲ್ಲಿ ಹಿಂದೂ ಜನರು ಹಂಗುತೊರೆದು ಹೋರಾಟನಡೆಸಿದರು. ಚಳುವಳಿ ತೀವ್ರಗೊಂಡಿತು. ರಜಾಕಾರರ ಚಳುವಳಿಯೂ ಅತಿರೇಕಕ್ಕೆ ಹೋಯಿತು. ೧೯೪೮ ಸಪ್ಟಂಬರ್ ತಿಂಗಳಿನಲ್ಲಂತೂ ರಜಾಕಾರರು ಹಿಂದೂ ಜನರನ್ನು ಅಮಾನವೀಯತೆಯಿಂದ ಕಗ್ಗೊಲೆ ಮಾಡತೊಡಗಿದರು. ರಜಾಕಾರರ ದಂಡನಾಯಕನಾಗಿದ್ದ ಕಾಶೀಂ ರಜ್ವಿಯ ರಾಕ್ಷಸೀ ಪ್ರವೃತ್ತಿಯು ಮಿತಿಮೀರಿತು. ಹತಾಶನಾದಂತಾಗಿ ಸಾಮೂಹಿಕ ಹತ್ಯೆಗೆ (ಖತಲ್. ಎಆಮ್) ಆದೇಶ ನೀಡಿದರು.

ಆಸ್ತಿ ಲೂಟಿ ಮಾಡತೊಡಗುತ್ತ, ಸ್ತ್ರೀಯರ ಮಾನಭಂಗಗೊಳಿಸುತ್ತ, ಸಾಮೂಹಿಕ ಹತ್ಯೆಯನ್ನೂ ಕೈಕೊಂಡ ದೃಶ್ಯಗಳು, ಎಲ್ಲಿ ನೋಡಿದಲ್ಲಿ ಅಕರಾಳ ವಿಕರಾಳವಾಗಿ ಕಾಣಿಸಿಕೊಂಡವು. ರುಂಡಮುಂಡಗಳನ್ನು ಕತ್ತರಿಸುವ ಭೀಭತ್ಸ ದೃಶ್ಯಗಳು ಬೀದರ ಜಿಲ್ಲೆಯ ಗೋರ್ಟಾ ಗ್ರಾಮದಲ್ಲಂತೂ ಭೀಕರತೆಯನ್ನು ತಂದೊಡ್ಡಿತು.

ಇದನ್ನು ಕಂಡ ಕಾಂಗ್ರೆಸ್ ಮುಖಂಡರು ಹದಗೆಟ್ಟ ಹೈದ್ರಾಬಾದಿನ ಚಿತ್ರಣವನ್ನು ರಾಷ್ಟ್ರಮಟ್ಟದ ಮುಖಂಡರಿಗೆ ಮನವರಿಕೆ ಮಾಡಿಕೊಟ್ಟರು. ವಲ್ಲಭಭಾಯಿ ಪಟೇಲರು ಸೈನಿಕ ಕ್ರಮ ಕೈಕೊಳ್ಳಲು ಯೋಚಿಸುತ್ತಿರುವಾಗ ಸೈನಿಕಪದದ ಬದಲು ಪೋಲಿಸ ಕಾರ್ಯಾಚಾರಣೆ (ಪೋಲಿಸ ಎಕ್ಸನ್) ಪದ ಬಳಸಲು ರಾಜಗೋಪಾಲಾಚಾರಿಯವರು ತಿಳಿಸಿದರು.

ಹಿಂದೂ ಜನರು ಪಡುತ್ತಿರುವ ಕಷ್ಟ ತಾಪತ್ರಯಗಳನ್ನು ಕಣ್ಣಾರೆಕಂಡ ಶ್ರೀಶಂಕರಶೆಟ್ಟರು ಎಲ್ಲವನ್ನೂ ಸಹಿಸಿಕೊಂಡು ಜನತೆಗೆ ತಾಳ್ಮೆಯಿಂದಿರಲು ಹೇಳುತ್ತಿದ್ದರು. ಕೇಡು ಬಗೆದವರು ಪ್ರಾಯಶ್ಚಿತ್ ಪಡುತ್ತಾರೆ. ನೋಡುವಂತಿರ್ರಿ ಎಂದು ಧೈರ್ಯ ತುಂಬುತ್ತಿದ್ದರು. ಗುರುಗಳು ಹೇಳುತ್ತಿದ್ದ ಮಹಾದೇವಿಯಕ್ಕನ ವಚನವನ್ನು ಸ್ಮರಿಸಿಕೊಂಡು. ಶಿರಹರಿದು ಬಿದ್ದರೆ ಪ್ರಾಣನಿಮಗರ್ಪಿತವೆಂಬೆನು' ಎಂದುಕೊಳ್ಳುತ್ತಿದ್ದರು.

ಇವನಾರವ ಇವನಾರವ
ಇವನಾರವನೆಂದೆನಿಸದಿರಯ್ಯ
ಇವ ನಮ್ಮವ ಇವ ನಮ್ಮವ
ಇವ ನಮ್ಮವನೆಂದೆನಿಸಯ್ಯಾ
ಕೂಡಲಸಂಗಮ ದೇವಾ
ಇವ ನಮ್ಮ ಮನೆಯ ಮಗನೆಂದೆನಿಸಯ್ಯಾ

– ಬಸವಣ್ಣ

ವಲ್ಲಭಭಾಯಿ ಪಟೇಲರು ಸಾಮೋಪಾಯದಿಂದ ನಿಜಾಮನಿಗೆ ಪತ್ರ ಬರೆದರು. ಅದಕ್ಕೆ ಸೊಪ್ಪುಹಾಕದ ನಿಜಾಮನ ಸೊಕ್ಕನ್ನು ಅಡಗಿಸಲು ಕ್ರಮಕೈಕೊಂಡರು. ದಿ:೨೬ ಮೇ ೧೯೪೮ರಂದು ಸರದಾರ ಪಟೇಲರು ಆದೇಶ ಹೊರಡಿಸಿದರು. ಮುಸ್ಲೀಮೇತರರ ಪ್ರಾಣ ಹಾಗೂ ಆಸ್ತಿಗಳನ್ನು ರಕ್ಷಿಸಲು ಸಿದ್ಧರಾಗಿದ್ದ ಯೋಧರಿಗೆ ನೆರವಾಗಲು ಗಡಿಯುದ್ದಕ್ಕೂ ಸೈನ್ಯ ಕಳಿಸಿದರು. ಶಿಬಿರಾರ್ಥಿಗಳಿಗೆ ಬಲಬಂದಿತು, ಚೇತರಿಸಿಕೊಂಡರು.

## ದಿಗ್ಬಂಧನ :

ಎರಡನೇ ಜುಲೈ ೧೯೪೮ರಂದು ರಾಜ್ಯಮಾಲಿಕತ್ವದಲ್ಲಿದ್ದು ದಖನ್ ವಿಮಾನಯಾನದ ಸೇವೆಯನ್ನು ನಿಲ್ಲಿಸಲು ಆಜ್ಞೆ ಹೊರಡಿಸಿದರು. ಮೂರನೇ ಜುಲೈ ೧೯೪೮ರಂದು ಭಾರತ ಗವ್ವರ್ನರ್ ಜನರಲ್‌ರಾಗಿದ್ದ ರಾಜಗೋಪಾಲಾಚಾರಿಯವರು ಸುಗ್ರೀವಾಜ್ಞೆ ಹೊರಡಿಸಿ, ನಿಜಾಮ ಸರಕಾರ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದಗಳ ವಶದಲ್ಲಿರುವ ಸೆಕ್ಯುರಿಟಿಗಳನ್ನು ವರ್ಗಾಯಿಸುವಂತೆ ನಿಯಂತ್ರಿಸಿದರು. ಮರುದಿನದಿಂದ ರಫ್ತು ನಿಷೇಧಿಸಿದರು. ಹನ್ನೊಂದು ಜುಲೈ ೧೯೪೮ರಂದು ಭಾರತೀಯ ರಿಜರ್ವ ಬ್ಯಾಂಕ್ ಆಫ್ ಹೈದ್ರಾಬಾದ ರಾಜ್ಯದ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸಿತು.

## ಪೋಲಿಸ್ ಎಕ್ಸನ್ :

ಸರದಾರ ವಲ್ಲಭಭಾಯಿ ಪಟೇಲರು ಹೈದ್ರಾಬಾದಿನ ಮೇಲೆ ದಿ ೧೩–೯–೧೯೪೮ರಂದು ರಾತ್ರಿ ೧೨ಗಂಟೆಗೆ ಪೋಲಿಸ್ ಎಕ್ಸನ್ ಕ್ಕೆ ಆದೇಶ ನೀಡಿದರು. ಕೂಡಲೇ ಬೆಳಗಿನ ೪ ಗಂಟೆಗೆ ಪೋಲಿಸ್ ಕಾರ್ಯಾಚರಣೆ ಕೇಂದ್ರ ಸರಕಾರ ನಡೆಸಿತು.

ಇದರ ನೇತೃತ್ವವನ್ನು ದಕ್ಷಿಣ ಸೈನ್ಯ ವಿಭಾಗದ ಪ್ರಧಾನ ಅಧಿಕಾರಿ ಲೆಫ್ಟನಂಟ ಜನರಲ್ ಮಹಾರಾಜ ಶ್ರೀರಾಜೇಂದ್ರ ಸಿಂಹಾಜಿ ಮತ್ತು ಮೇಜರ ಜನರಲ್ ಜಿ.ಎನ್. ಚೌಧರಿಯವರು ವಹಿಸಿಕೊಂಡರು. ಹೈದ್ರಾಬಾದ ಸಂಸ್ಥಾನವನ್ನು ಭಾರತೀಯ ಪಡೆಗಳು ಏಕಕಾಲಕ್ಕೆ ಎಲ್ಲ ಕಡೆಗಳಿಂದಲೂ ದಾಳಿ ನಡೆಸಿದವು. ಮೇಜರ ಜನರಲ್ ಜಿ.ಎನ್. ಚೌಧರಿಯವರು ಸೊಲ್ಲಾಪೂರ ಭಾಗದಿಂದ ಕಾರ್ಯಾಚರಣೆ ಕೈಕೊಂಡರು. ಭಾರತೀಯ ಸೈನ್ಯ ಶ್ರೇಷ್ಠಮಟ್ಟದ ಶಸ್ತ್ರಾಸ್ತ್ರಗಳಿದ್ದ ಯುದ್ಧ ಕೌಶಲ್ಯದಿಂದ ಕೂಡಿದ ಪರಿಪೂರ್ಣತೆ ಪಡೆದುದಾಗಿತ್ತು.

ಪ್ರಾಣಭಯದಿಂದ ರಜಾಕಾರರು ಶಸ್ತ್ರತ್ಯಜಿಸಿ ದಿಕ್ಕು ತಪ್ಪಿ ಸಿಕ್ಕ ಸಿಕ್ಕತ್ತ ಓಡತೊಡಗಿದರು. ದಿ: ೧೭-೯-೧೯೪೮ ರಂದು ಜನರಲ್ ರಾಜಗೋಪಾಲಚಾರಿಯವರಿಗೆ ಬರೆದ ಪತ್ರದ ಪ್ರತಿಯಂತೆ ಮೀರ ಉಸ್ತಾದ ಅಲಿಖಾನರು ಭಾರತ ಸರಕಾರಕ್ಕೆ ಶರಣಾದೆ ಎಂದು ಕೆಳಗಿನಂತೆ ಹೈದ್ರಾಬಾದ ಆಕಾಶವಾಣಿಯಿಂದ ಪ್ರಸಾರಭಾಷಣ ಮಾಡಿದರು.

"ಇಂದು ಸಾಯಂಕಾಲ ೫ ಗಂಟೆಗೆ ಯುದ್ಧ ನಿಲ್ಲಿಸಲು ನನ್ನ ಸೈನಿಕರಿಗೆ ಆಜ್ಞೆಮಾಡಿರುವೆ. ಭಾರತ ಸೈನ್ಯ ನಿರಾತಂಕವಾಗಿ ಸಿಕಂದ್ರಾಬಾದ ಪ್ರವೇಶಿಸಲು ತಿಳಿಸಿರುವೆನು, ಮಿರ ಲಾಯಿಕ್ ಅಲಿ ಮಂತ್ರಿಮಂಡಳದ ರಾಜನಾಮೆ ಸ್ವೀಕರಿಸಿರುವೆ. ಸ್ವಾಮಿ ರಾಮನಂದ ತೀರ್ಥರನ್ನು ಬಿಡುಗಡೆ ಮಾಡುವಂತೆಯೂ ಇತರ ಕಾಂಗ್ರೆಸ್ ಮುಖಂಡರುಗಳ ಮೇಲಿರುವ ವಾರಂಟ ಹಿಂತೆಗೆದುಕೊಳ್ಳಲು ಆಜ್ಞೆ ಮಾಡಿರುವೆನು. ಸಂಸ್ಥಾನದ ಪ್ರಜೆಗಳು ಶಾಂತವಾಗಿರಬೇಕು"

ಎಂದು ಸಾರುತ್ತ ನಿಜಾಮನು ಭಾರತ ಸರಕಾರಕ್ಕೆ ಶರಣಾದನು. ಶ್ರೀ ಶಂಕರಶೆಟ್ಟಿ ಪಾಟಿಲರಿಗಂತೂ ಇತರ ಮುಖಂಡರಂತೆ 'ಅತೀವ ಸಂತೋಷವಾಯಿತು. ಶಾಂತಿ ಪಾಲನೆಗಾಗಿ, ಅಲ್ಲಲ್ಲಿ ಸಂಚರಿಸತೊಡಗಿದರು . ಶಾಂತಿ ಸಮಾಧಾನದಿಂದ ಜನತೆಯ ಮನವೊಲಿಸತೊಡಗಿದರು.

## ಹೈದ್ರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನ :

ದಿ ೧೮-೯-೧೯೪೮ರಂದು ಹೈದ್ರಾಬಾದ ಸಂಸ್ಥಾನ ಭಾರತದಲ್ಲಿ ವಿಲೀನಗೊಂಡಿತು. ಹೊಸ ಹೈದ್ರಾಬಾದ ರಾಜ್ಯದ ಮಿಲಿಟರಿ ಗವ್ಹರ್ನರ್ ಜನರಲ್ಲರನ್ನಾಗಿ ಮೇಜರ್ ಜನರಲ್ ಜೆ.ಎನ್.ಚೌಧರಿ ಅವರನ್ನು ಭಾರತ ಸರಕಾರ ನೇಮಿಸಿತು. ಕಾಸಿಂ ರಜ್ವಿಯನ್ನು ಬಂಧಿಸಿದರು.

"ನಿಸ್ವಾರ್ಥ ಮನೋಭಾವದಿಂದ ನಿಜಾಮನ ವಿರುದ್ಧ ನಿರಂತರವಾಗಿ ಸ್ವಾತಂತ್ರ್ಯಯೋಧರು ಹೋರಾಟ ನಡೆಸದೇ ಹೋಗಿದ್ದರೆ ಹಾಗೂ ಕೊನೆಯಲ್ಲಿ ಪೋಲಿಸ್ ಕಾರ್ಯಾಚರಣೆ ಜಾರಿಗೊಳಿಸದೆ ಇದ್ದಿದ್ದರೆ, ಭಾರತ ಭೂಪಟದ ಹೃದಯ ಭಾಗದಲ್ಲಿ ಪಾಕಿಸ್ತಾನದಂಥ ಇನ್ನೊಂದು ವಿದೇಶಿ ರಾಷ್ಟ್ರವು ವಾಸಿ ಆಗಲಾರದ ಹುಣ್ಣಿನಂತೆ ಉದ್ಭವಿಸುತ್ತಿತ್ತು. ಹೈದ್ರಾಬಾದ ಸಂಸ್ಥಾನವನ್ನು ಭಾರತ ಒಕ್ಕೂಟದೊಂದಿಗೆ ವಿಲೀನಗೊಳಿಸದೇ ಬಿಟ್ಟಿದ್ದರೆ ದೇಶವು ಅತೃಪ್ತಿಯಿಂದ ಕುದ್ದುಹೋಗುತ್ತಿತ್ತು. ಇತ್ತೇಹಾದನ ಕೋಮುವಾದದಿಂದಾಗಿ ಎರಡು ಪ್ರಧಾನ ಸಮುದಾಯಗಳ ನಡುವೆ ಅಂತಕಲಹ ಬೆಳೆದು ಬಿಡುತ್ತಿತ್ತು"

ಎಂದಂದ ಡಾ. ಬಿ.ಸಿ. ಮಹಾಬಳೇಶ್ವರಪ್ಪನವರ ಮಾತಿನಲ್ಲಿ ಅತಿಶಯೋಕ್ತಿಯೇನಿಲ್ಲ.

### ಭಾವೈಕ್ಯತೆಯಿಂದ ಬದುಕಲು ಗೌಡರ ಕರೆ :

ಪೋಲಿಸ ಕಾರ್ಯಾಚರಣೆಯ ತರುವಾಯ ಮುಸಲ್ಮಾನರು ಕಂಗಾಲಾದರು. ಮನೆ ಮಾರು ತೊರೆದರು. ಆಸ್ತಿ ಪಾಸ್ತಿಗಳನ್ನು ಇದ್ದಲ್ಲಿಯೆ ಬಿಟ್ಟು ಸಿಕ್ಕಸಿಕ್ಕತ್ತ ಓಡತೊಡಗಿದರು. ಬೇಕಾದವರು ಬೇಕಾದಷ್ಟು ಎತ್ತಿಕೊಂಡು ತಮ್ಮ ಮನೆಗಳನ್ನು ತುಂಬಿಕೊಳ್ಳತೊಡಗಿದರು. ಲಾರಿಗಳಲ್ಲಿ ಬೆಲೆಯುಳ್ಳ ವಸ್ತು ವಡವೆಗಳನ್ನು ತುಂಬಿಕೊಂಡು ತಮ್ಮೂರಿಗೆ ಕೊಂಡೊಯ್ದು ವಿಷಯಗಳನ್ನು ನಾನೂ ಬಲ್ಲೆ. ಸೇಡು ತೀರಿಸಿಕೊಳ್ಳುವುದು ಬೇಡ: ನಾವೆಲ್ಲರೂ ಕೂಡಿ ಬಾಳಲೇಬೇಕು ಎಂದು ಆರ್ಯಸಮಾಜದ, ತರುಣ ಸಂಘದ ಹಿಂದೂ ಸಂಘಟನೆಗಳ ಕಾರ್ಯಕರ್ತರು ತಮ್ಮ ಹಿಂದೂ ಜನತೆಗೆ ಕಳಕಳಿಯಿಂದ ಮನವಿ ಮಾಡಿಕೊಳ್ಳತೊಡಗಿದರು. ಮಹಾಗಾಂವದ ಚಂದ್ರಶೇಖರ ಪಾಟೀಲ, ಕಮಲಾಪೂರದ ಶಂಕರಶೆಟ್ಟಿ ಪಾಟೀಲ ಮೊದಲಾದವರು ಈ ಭಾಗದ ಹಳ್ಳಿಹಳ್ಳಿಗೂ ಹೋಗಿ ಹಿಂದೂ ಮುಸಲ್ಮಾನರಲ್ಲಿ ಭಾವೈಕ್ಯತೆಯಿಂದ ಬದುಕಬೇಕೆಂದು ಕರೆನೀಡಿದರು. ಮನೆಮಾರು ತೊರೆದುಹೋಗಿದ್ದ ಮುಸಲ್ಮಾನರನ್ನು ಕರೆಸಿ ಪ್ರೀತಿಯಿಂದ ಬದುಕಲು ಆಸ್ಪದ ಮಾಡಿಕೊಟ್ಟರು. ಇದರಿಂದ ಅರಾಜಕತೆಯ ಈ ತಾಣ ತಣ್ಣಗಾಗಿ ನೆಮ್ಮದಿಯಿಂದ ಬಾಳತೊಡಗಿದರು.

### ಇಸ್ಮಾಯಿಲ್ ಸಾಬನ ತಪ್ಪೊಪ್ಪಿಗೆ :

ಕಮಲಾಪೂರದ ಶಂಕರಶೆಟ್ಟಿ ಒಂದು ದಿನ ತಮ್ಮ ಹೊಲದಲ್ಲಿ ಅಡ್ಡಾಡುತ್ತಿದ್ದರು. ಅಲ್ಲಿಗೆ ಇಸ್ಮಾಯಿಲ್ ಸಾಬ ಗುಡುಸಾಬ ಜಾಲಿಗಾರ ಎಂಬವನು ಬಂದು ಗೌಡರ ಕಾಲಿಗೆಬಿದ್ದು ಕ್ಷಮಿಸಿರಿ ಎಂದು ಪಾದಹಿಡಿದು ಬಿಡದಾದನು. ಅವನನ್ನು ಪ್ರೀತಿಯಿಂದ ಕೈಹಿಡಿದು ಮೇಲಕ್ಕೆಬ್ಬಿಸಿದ ಗೌಡರು ಯಾರಪ್ಪಾ ನೀನು? ಎಂದು ಕೇಳಿದರು. ಗೌಡರು ಅವನನ್ನು ಕಾಲಿನಿಂದ ಒದೆಯಬೇಕಾಗಿತ್ತು. ಹಾಗೆ ಮಾಡದೆ ಅವನನ್ನು ಪ್ರೀತಿಯಿಂದ ಮಾತನಾಡಿಸಿದರು. ಆಗ ಆ ಪಾಪಿ, ನಾನು ಗೌಡರೆ, ದಯಮಾಡಿ ನನ್ನನ್ನು ಕ್ಷಮಿಸಿರಿ ಎಂದು ಮತ್ತೆ ಮತ್ತೆ ಕಾಲಿಗೆ ಬೀಳುತ್ತ ಬೇಡಿಕೊಳ್ಳತೊಡಗಿದನು. ಆಗ ಗೌಡರು ಎಳ್ಳಷ್ಟು ಸಿಟ್ಟಿಗೇಳದೆ, ಇಸ್ಮಾಯಿಲ್ ತಪ್ಪು ನಿನ್ನದಲ್ಲ. ನಿನ್ನನ್ನು ತಪ್ಪುದಾರಿಗೆಳೆದ ಆ ರಜಾಕಾರರದು. ನೀನೇನೂ ಚಿಂತಿಸಬೇಡ ವ್ಯಥೆಪಟ್ಟು ಕೊಳ್ಳಬೇಡ, ಯಾರಾದರೂ ನೋಡಿದರೆ ನಿನ್ನನ್ನು ಸೇಡು ತೀರಿಸಿಕೊಳ್ಳಲು ಕೊಲ್ಲಬಹುದು. ಬೇಡ ಇಲ್ಲಿಂದ ಹೊರಟು ಹೋಗು, ವಿಷಯ ತಿಳಿಯಾಗುವವರೆಗೆ ನೀನು ಈ ಊರಿಗೆ ಬರಬೇಡ. ಇಲ್ಲಿಂದ ಎಲ್ಲಿಂದ ಬಂದಿದೆಯೊ ಅಲ್ಲಿಗೆ ಯಾರಿಗೂ ಕಾಣದ ಹಾಗೆ ಓಡಿ ಹೋಗೆಂದು ಬಸ್ ಚಾರ್ಜ ಕೂಡ ಕೊಟ್ಟು ಗೌಡರು ಕಳಿಸಿದರು.

ಶಂಕರಶೆಟ್ಟರು ತನಗೆ ಗುಂಡು ಹಾಕಿ, ಕೊಲ್ಲಲು ಪ್ರಯತ್ನಿಸಿದ ದುಷ್ಟನನ್ನು ಕ್ಷಮಿಸಿದ, ಕಾಪಾಡಿದ, ರಕ್ಷಿಸಿದ ಗುಣ ನಿಜಕ್ಕೂ ಮಹಾತ್ಮರದು. ಇವನು ನನ್ನನ್ನು ಕೊಲ್ಲಲು ಬಂದವನು. ಬಿಡಬಾರದು ಕೊಲ್ಲಬೇಕು ಎನ್ನದೆ ಇವನಾರವ ಇವನಾರವ ಎನ್ನದೆ ಇವನೂ ತಮ್ಮ ಮನೆಯ ಮಗನೆಂದೇ ಬಗೆದ ಶ್ರೀಶಂಕರಶೆಟ್ಟಿ ಪಾಟೀಲರ ಗುಣ ಬಹಳ ದೊಡ್ಡದು. ವಿಶ್ವವಿಶಾಲವಾದದ್ದು.

ಹೊಯಿದವರೆನ್ನ ಹೊರೆದವರೆಂಬೆ
ಬಯಿದವರೆನ್ನ ಬಂಧುಗಳೆಂಬೆ
ನಿಂದಿಸಿದವರೆನ್ನ ತಂದೆತಾಯಿಗಳೆಂಬೆ,
ಆಳಿಗೊಂಡವರೆನ್ನ ಆಳ್ದವರೆಂಬೆ,
ಜರಿದವರೆನ್ನ ಜನ್ಮ ಬಂಧುಗಳೆಂಬೆ,
ಹೊಗಳಿದವರೆನ್ನ ಹೊನ್ನ ಶೂಲದಲಿಕ್ಕಿದರೆಂಬೆ
ಕೂಡಲಸಂಗಮದೇವಾ

- ಬಸವಣ್ಣ

## ಹೈದ್ರಾಬಾದ ಸಂಸ್ಥಾನ ಸ್ವತಂತ್ರವಾಯಿತು.:

ಹೈದ್ರಾಬಾದ ಸಂಸ್ಥಾನವು ನಿಜಾಮನ ಹಿಡಿತದಿಂದ ಪಾರಾಗಿ ಸ್ವತಂತ್ರವಾಯಿತು. ಕೆಲಕಾಲ ಮಿಲಿಟರಿ ಆಡಳಿತ ಹೊಂದಿತು. ಅಲ್ಲಲ್ಲಿ ಅರಾಜಕತೆ ಕಾಣಿಸುತ್ತಲಿತ್ತು. ಭಾಷಾವಾರ ಪ್ರಾಂತರಚನೆಗೆ ಅಂಟಿಕೊಂಡ ಆಂಧ್ರದವರು ವಿಶಾಲಾಂಧ್ರಕ್ಕಾಗಿ ಹೋರಾಟ ನಡೆಸಿದ್ದರು. ಮರಾಠಿಗರು ವಿಶಾಲ ಮಹಾರಾಷ್ಟ್ರಕ್ಕಾಗಿಯೂ ಕನ್ನಡಿಗರು ಕರ್ನಾಟಕ ಏಕೀಕರಣಕ್ಕಾಗಿಯೂ ಚಳುವಳಿ ಪ್ರಾರಂಭಿಸಿದರು. ಇಂಥ ಪರಿಸ್ಥಿತಿಯಲ್ಲಿ ರಾಜ್ಯಗಳ ಸಚಿವಾಲಯದ ಕಾರ್ಯದರ್ಶಿಯಾಗಿದ್ದ ಎಸ್.ಕೆ.ವೆಲ್ಲೋಡಿಯವರನ್ನು ದಿ.೧-೧೨-೧೯೪೯ರಂದು ಹೈದ್ರಾಬಾದ ರಾಜ್ಯದ ಮುಖ್ಯಮಂತ್ರಿಯನ್ನಾಗಿ ಉಪಪ್ರಧಾನಮಂತ್ರಿಗಳು ನೇಮಿಸಿದರು. ಈ ವೆಲ್ಲೋಡಿ ಸಂಪುಟದಲ್ಲಿ ಇಬ್ಬರು ಸ್ಥಳೀಯ ಮಂತ್ರಿಗಳಿದ್ದರು. ಮುಂದೆ ದಿ.೧೨-೬-೧೯೫೦ರಂದು ಕಾಂಗ್ರೆಸಿನ ಬಿ.ರಾಮಕೃಷ್ಣರಾವ್, ಪುಲ್ ಚಂದ ಗಾಂಧಿ, ವಿನಾಯಕರಾವ್ ಮತ್ತು ವ್ಹಿ.ಬಸವರಾಜು ಈ ನಾಲ್ವರು ವೆಲ್ಲೋಡಿ ಸಂಪುಟ ಸೇರಿದರು. ಈ ಮಂತ್ರಿಮಂಡಳದ ಆಡಳಿತವು ೧೯೫೨ ರ ವರೆಗೆ ಮುಂದುವರಿಯಿತು. ಈ ಅವಧಿಯಲ್ಲಿ ಪ್ರತಿಯೊಂದು ಜಿಲ್ಲೆ ತಾಲೂಕುಗಳಿಗೆ ಸಮಿತಿಗಳನ್ನು ರಚಿಸಿದ್ದಲ್ಲದೆ ಗುಲಬರ್ಗಾ ಜಿಲ್ಲೆಗೆ ಅಧ್ಯಕ್ಷರೆಂದು ಮಹಾಗಾಂವದ ಶ್ರೀ ಚಂದ್ರಶೇಖರ ಪಾಟೀಲರನ್ನು, ತಾಲೂಕ ಅಧ್ಯಕ್ಷರೆಂದು ಶ್ರೀ ಶಂಕರ ಶೆಟ್ಟಿ ಪಾಟೀಲರನ್ನು ನಿಯಮಿಸಿದ್ದಲ್ಲದೆ ಶಂಕರಶೆಟ್ಟಿ ಪಾಟೀಲರನ್ನು ಜಿಲ್ಲಾ ಕಾಂಗ್ರೆಸ್ಸಿನ ಕಾರ್ಯದರ್ಶಿಯನ್ನಾಗಿಯೂ ಕಾಂಗ್ರೆಸ್ ನಿಯಮಿಸಿತು.

ಈ ಅವಧಿಯಲ್ಲಿ ಕ್ರಿ.ಶ.೧೯೫೨ರಲ್ಲಿ ಭಾರತ ಸರಕಾರ ಸಾರ್ವತ್ರಿಕ ಚುನಾವಣೆ ನಡೆಸಲು ಘೋಷಣೆ ಮಾಡಿತು. ಆ ಪ್ರಕಾರ ೧೯೫೨ರಲ್ಲಿ ಜನರಿಂದ ಚುನಾಯಿತವಾದ ಹೊಸ ಸರಕಾರ ಹೈದ್ರಾಬಾದ ರಾಜ್ಯದಲ್ಲಿ ರಚನೆಯಾಯಿತು. ಜೊತೆ ಜೊತೆಗೆ ಕರ್ನಾಟಕ ಏಕೀಕರಣದ ಹೋರಾಟ ನಡದೇ ಇತ್ತು. ಕನ್ನಡಿಗರು ಮುಂಬೈ ಮದರಾಸ ಮೈಸೂರು ಹೈದ್ರಾಬಾದ ಹಾಗೂ ಕೊಡಗು ಪ್ರಾಂತಗಳಲ್ಲಿ ಹಂಚಿಹೋಗಿದ್ದರು. ಇವುಗಳನ್ನು ಕೂಡಿಸಿ ಅಖಂಡ ಕರ್ನಾಟಕಕ್ಕಾಗಿ ಕನ್ನಡಿಗರು ಹೋರಾಟ ನಡೆಸಿದ್ದರು. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿ ಬೆಳೆಯಲು ಈ ಏಕೀಕರಣ ತೀರ ಅವಶ್ಯವಾಗಿತ್ತು. ಅಲ್ಲಲ್ಲಿ ಇದಕ್ಕಾಗಿ ಸಭೆ ಸಮ್ಮೇಳನಗಳನ್ನು ನಡೆಸುತ್ತಲಿದ್ದರು ಶ್ರೀಶಂಕರ ಶೆಟ್ಟಿ ಪಾಟೀಲರೂ ಈ ಏಕೀಕರಣ ಚಳುವಳಿಯಲ್ಲಿ ಸಕ್ರಿಯ ಕಾರ್ಯಕರ್ತರಾಗಿದ್ದರು.

೧೯೪೯ ಮಾರ್ಚ ತಿಂಗಳಲ್ಲಿ ೬೨ನೇ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವು ಗುಲಬರ್ಗಾದ ಶ್ರೀಶರಣ ಬಸವೇಶ್ವರ ದೇವಾಲಯದ ಆವರಣದಲ್ಲಿ ಜರುಗಿತ್ತು. ಸಮ್ಮೇಳನದ ಅಧ್ಯಕ್ಷತೆಯನ್ನು ಉತ್ತಂಗಿ ಚನ್ನಪ್ಪನವರು ವಹಿಸಿದ್ದರು. ಈ ಸಮ್ಮೇಳನದಲ್ಲಿ ಪುಜ್ಯ ದೊಡ್ಡಪ್ಪ ಅಪ್ಪ, ಸ್ವಾಮಿ ರಮಾನಂದ ತೀರ್ಥ, ಎಸ್ ನಿಜಲಿಂಗಪ್ಪ, ಹೆಗಡೆ ಜಿನರಾಜ, ಗುದ್ಲೆಪ್ಪ

ಹಳ್ಳಿಕೇರಿ ಜಯದೇವಿ ತಾಯಿ ಲಿಗಾಡೆ, ಭಾಲ್ಕಿಯ ಚನ್ನಬಸವ ಪಟ್ಟದ್ದೇವರು, ಸಿದ್ಧಯ್ಯ ಪುರಾಣಿಕ, ಕಪಟರಾಳ ಕೃಷ್ಣರಾವ, ಚಂದ್ರಶೇಖರ ಶಾಸ್ತ್ರಿ ಮೊದಲಾದವರು ಭಾಗವಹಿಸಿದ್ದರು.

ಶಂಕರಶೆಟ್ಟಿ ಪಾಟೀಲರು ಈ ಸಮ್ಮೇಳನದ ಯಶಸ್ವಿಗೆ ತನುಮನಧನದಿಂದ ಸೇವೆಸಲ್ಲಿಸಿರುವುದನ್ನು ಸ್ಮರಿಸಬಹುದಾಗಿದೆ.ಈ ಸಮ್ಮೇಳನದಲ್ಲಿ ಹೈದ್ರಾಬಾದ ಸಂಸ್ಥಾನದ ಕನ್ನಡ ಪ್ರದೇಶಗಳನ್ನು ಕರ್ನಾಟಕದಲ್ಲಿ ವಿಲೀನಗೊಳಿಸುವ ಮತ್ತು ಕನ್ನಡ ಶಾಲೆಗಳನ್ನು ತೆರೆಯುವಂತೆ ಸರ್ವಾನುಮತದ ಗೊತ್ತುವಳಿಗಳನ್ನು ಅಂಗೀಕರಿಸಿತು. ಕರ್ನಾಟಕದಾದ್ಯಂತ ಕರ್ನಾಟಕ ಏಕೀಕರಣ ಚಳುವಳಿ ಉಗ್ರಸ್ವರೂಪ ತಾಳಿತು.

## ಫಜಲ್ ಅಲಿ ಆಯೋಗ :

ಮುಖಂಡರು ಭಾರತ ಸರಕಾರವನ್ನು ಒತ್ತಾಯಿಸಲು ಕರ್ನಾಟಕ ಏಕೀಕರಣ ಮಹಾಸಮಿತಿಯ ಅಧ್ಯಕ್ಷರಾಗಿದ್ದ ಎಸ್.ನಿಜಲಿಂಗಪ್ಪನವರು ಕೆ.ಪಿ.ಸಿ.ಸಿಯ ಅಧ್ಯಕ್ಷರೂ ಆಗಿದ್ದರು. ೧೯೪೯ರಲ್ಲಿ ದಾವಣಗೆರೆಯ ಕೆ.ಪಿ.ಸಿ.ಸಿ ಸಭೆಯಲ್ಲಿ ಹೈದ್ರಾಬಾದ ಕರ್ನಾಟಕ ಪ್ರದೇಶವನ್ನು ಸೇರಿಸಿಕೊಂಡು ಅಖಿಲ ಕರ್ನಾಟಕ ರಾಜ್ಯ ರಚಿಸಬೇಕೆಂಬ ಠರಾವ ಪಾಸು ಮಾಡಿ ಭಾರತ ಸರಕಾರಕ್ಕೆ ಸಲ್ಲಿಸಿತು. ಕೊಪ್ಪಳನಾಡಿನ ರೈತಪರಿಷತ್ತಿನಲ್ಲಿಯೂ ಹೈದ್ರಾಬಾದ ಕರ್ನಾಟಕವನ್ನು ಕರ್ನಾಟಕದಲ್ಲಿ ಸೇರ್ಪಡೆ ಮಾಡಿ ಕರ್ನಾಟಕ ರಾಜ್ಯ ರಚಿಸಬೇಕೆಂಬ ನಿರ್ಣಯಗಳನ್ನು ಕೈಗೊಂಡಿತು. ಚಂದ್ರಶೇಖರ ಪಾಟೀಲರು ಗುಲಬರ್ಗಾದಲ್ಲಿ ಪ್ರಭೂರಾವ್ ಕಂಬಳಿವಾಲೆಯವರು ಉದಗೀರದಲ್ಲಿ, ಶಂಕರಶೆಟ್ಟಿ ಪಾಟೀಲರು ಗುಲಬರ್ಗಾದ ರೇಲ್ವೆ ನಿಲ್ದಾಣದಲ್ಲಿ ಸತ್ಯಾಗ್ರಹ ನಡೆಸಿದರು. ಆಗ ಭಾರತ ಸರಕಾರ ಫಜಲ್ ಅಲಿ ಆಯೋಗ ರಚಿಸಿತು.

ದಿ:೨೯-೧೨-೧೯೫೩ರಂದು ಭಾರತ ಸರಕಾರದ ಕೇಂದ್ರ ಗೃಹ ಸಚಿವಾಲಯವು ಒಂದು ಪ್ರಕಟನೆ ಹೊರಡಿಸಿ ರಾಜ್ಯಪುನರ್ವಿಂಗಡೆಣೆಗಾಗಿ ಫಜಲ್ ಅಲಿ ಆಯೋಗ ಒಂದನ್ನು ನೇಮಿಸಿತು. ಸನ್ಮಾನ್ಯ ಫಜಲ್ ಅಲಿ ಅವರು ಅಧ್ಯಕ್ಷರಾಗಿದ್ದ ಈ ಆಯೋಗದಲ್ಲಿ ಕೆ.ಎಂ.ಫಣಿಕ್ಕರ್, ಎಚ್.ಎನ್.ಕುಂಜ್ರು ಅವರು ಆಯೋಗದ ಸದಸ್ಯರಾಗಿದ್ದರು, ಹೈದ್ರಾಬಾದ ಕರ್ನಾಟಕವನ್ನು ಅಖಿಲ ಕರ್ನಾಟಕದಲ್ಲಿ ವಿಲೀನಗೊಳಿಸಬೇಕೆಂದು ಜನತೆ ಉತ್ಸುಕತೆಯಿಂದ ಈ ಆಯೋಗಕ್ಕೆ ಮನವಿ ಪತ್ರಗಳನ್ನು ಸಲ್ಲಿಸಿದರು. ಶಂಕರಶೆಟ್ಟಿ ಪಾಟೀಲರು ಕರ್ನಾಟಕ ಏಕೀಕರಣದ ಈ ಹೋರಾಟದಲ್ಲಿ ಹಳ್ಳಿ ಹಳ್ಳಿಗೂ ತೆರಳಿ, ಎಲ್ಲ ಸಮುದಾಯದವರೂ ಆಯೋಗಕ್ಕೆ ಮನವಿ ಸಲ್ಲಿಸುವ ಏರ್ಪಾಟು ಮಾಡುತ್ತಿದ್ದರು.

## ರಾಜ್ಯ :

ಅಂದು ಮುಖ್ಯಮಂತ್ರಿಯಾಗಿದ್ದ ಕೆಂಗಲ್ ಹನುಮಂತಯ್ಯನವರು ಭಾಷಾವಾರ ಪ್ರಾಂತ ರಚನೆಯನ್ನು ಪ್ರತಿಪಾದಿಸಿ ಕನ್ನಡ ಮಾತನಾಡುವ ಪ್ರದೇಶಗಳಾದ ಕೊಡಗು, ಹೈದ್ರಾಬಾದ, ಮುದ್ರಾಸ ಸೊಂಡೂರ ಮುಂಬೈ ಪ್ರಾಂತಗಳು ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾಗಬೇಕೆಂದರು. ದಿ:೩೦-೯-೧೯೫೬ರಂದು ಫಜಲ ಅಲಿ ಕೇಂದ್ರ ಸರಕಾರಕ್ಕೆ ವರದಿ ಸಲ್ಲಿಸಿತು. ಕನ್ನಡಿಗರಿಗೆ ಅನ್ಯಾಯವಾಗಿದೆ. ಎಂದೂ ತಿಳಿಸಿತ್ತು. ೧-೧೧-೧೯೫೬ರಂದು ಹೈದ್ರಾಬಾದ ಕರ್ನಾಟಕದ ಬೀದರ, ರಾಯಚೂರ, ಗುಲಬರ್ಗಾ ಜಿಲ್ಲೆಗಳು ವಿಶಾಲ ಮೈಸೂರ ರಾಜ್ಯದಲ್ಲಿ ಸೇರ್ಪಡೆಯಾದವು. ಕನ್ನಡ ನಾಡು ಒಂದಾಯಿತು.

## ಕರ್ನಾಟಕ ರಾಜ್ಯ :

ವಿಶಾಲ ಮೈಸೂರ ರಾಜ್ಯ-ಒಂದು ಪ್ರಾಂತದ ಹೆಸರಿನಲ್ಲಿ ಸಮಾವೇಶಗೊಂಡದ್ದು ಬಹಳಷ್ಟು ಜನರಿಗೆ ಒಪ್ಪಿಗೆಯಾಗಲಿಲ್ಲ. ಹೋರಾಟ ಹಾಗೇ ಮುಂದುವರಿಯಿತು. ಫಜಲ ಅಲಿ ಆಯೋಗ ಕೂಡ ಕನ್ನಡಿಗರಿಗಾಗಿ ರಚನೆಯಾಗುವ ರಾಜ್ಯವನ್ನು ಕರ್ನಾಟಕ ಎಂದು ಕರೆಯಲು ಸೂಚಿಸಿತ್ತು. ಬಹುಜನರ ಅಭಿಲಾಷೆಯೂ ಅದೇ ಆಗಿತ್ತು. ಅದಕ್ಕಾಗಿ ಹೋರಾಟ ನಡೆದೇ ಇತ್ತು. ಮಾನ್ಯ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದಾಗ ದಿ.೧-೧೧-೧೯೭೩ರಂದು ರಾಜ್ಯಕ್ಕೆ ಕರ್ನಾಟಕ ಎಂದು ಪುನರ್ ನಾಮಕರಣ ಮಾಡಲಾಯಿತು. ಅರ್ಥಪೂರ್ಣವಾಗಿ ಸಡಗರ ಸಂಭ್ರಮದಿಂದ ಕರ್ನಾಟಕ ರಾಜ್ಯೋತ್ಸವ ಆಚರಿಸಿದರು.

ಹೊಡೆದವರು. ಬೈದವರು. ನಿಂದಿಸಿದವರು ನನ್ನ ಪಾಲಕರು, ಬಂಧುಗಳು, ತಂದೆ ತಾಯಿಗಳು ಎಂದು ಬಗೆದು ಬಾಳಬೇಕೆಂದುಕೊಂಡು ಕನ್ನಡ ಭಾಷಿಕರೆಲ್ಲರೂ ಕರ್ನಾಟಕ ರಾಜ್ಯೋತ್ಸವ ಆಚರಿಸಿದುದು ಶಂಕರಶೆಟ್ಟಿ ಪಾಟೀಲರಿಗೆ ಸಂತೋಷವನ್ನುಂಟು ಮಾಡಿತು.

**ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ**
ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ
ವೀರಸೋಮೇಶ್ವರ ರಾಜದೇಶಿ ಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು
ಬಾಳೆಹೊನ್ನೂರು

———ಸಾರ್ವಜನಿಕ ಜೀವನದಲ್ಲಿ ತಮ್ಮನ್ನೇ ತಾವು ತೊಡಗಿಸಿಕೊಂಡು ತೊಂಬತ್ತು ಸಂವತ್ಸರ ಸಂಧಿಸಿದ ಈ ಪರ್ವಕಾಲದಲ್ಲಿ ಸಮಾಜ ಅಭಿನಂದಿಸಬೇಕಾದುದು ಅಗತ್ಯ. ಅವರ ಪ್ರಾಮಾಣಿಕ, ಜನಹಿತ ಹಾಗೂ ರಚನಾತ್ಮಕ ಕಾರ್ಯಗಳು ಮನುಷ್ಯನಿಗೆ ಸ್ಫೂರ್ತಿಯನ್ನು ತರುವಲ್ಲಿ ಸಂಶಯವಿಲ್ಲ. ಆದರ್ಶ ಶಾಸಕರಾಗಿ ಕ್ಷೇತ್ರದ ಪ್ರಗತಿಗಾಗಿ ಶ್ರಮಿಸಿದ್ದು ಶ್ಲಾಘ್ಯ.

**ಡಾ.ಶ್ರೀ ಶಿವಕುಮಾರ ಮಹಾಸ್ವಾಮಿಗಳು**
ಶ್ರೀಸಿದ್ಧಗಂಗಾಮಠ
ತುಮಕೂರು

"———ಸಾರ್ವಜನಿಕ ಸೇವೆಯನ್ನೇ ಶಿವಪೂಜೆಯೆಂದು ಭಾವಿಸಿ ಸಮಾಜದ ಒಳಿತಿಗಾಗಿ ಶ್ರಮಿಸಿದವರನ್ನು ಗೌರವಿಸುವುದು ಸುಸಂಸ್ಕೃತಿಯ ಲಕ್ಷಣ. ಸತ್ಯಶುದ್ಧ ಕಾಯಕ, ಪ್ರಾಮಾಣಿಕತೆಗಳು ಕಣ್ಮರೆಯಾಗುತ್ತಿರುವ ಈ ದಿನಗಳಲ್ಲಿ ಶರಣ ಪಥದಲ್ಲಿ ನಡೆದು ಸಾರ್ಥಕ ಜೀವನವನ್ನು ಕಂಡ ಪುಣ್ಯಜೀವಿಗಳನ್ನು ಸತ್ಕರಿಸುವ ಪರಂಪರೆ ಬೆಳೆದುಬರಬೇಕು. ಇಂದು ರಾಜಕೀಯ ನೈತಿಕ ಅಧಃಪತನದ ರಾಜಮಾರ್ಗವಾಗಿರುವುದು ದುರ್ದೈವವೆಂದೇ ಭಾವಿಸಬೇಕು. ತಮ್ಮನ್ನು ಆರಿಸಿದ ಜನತೆ ತನ್ನಲ್ಲಿಟ್ಟ ನಂಬಿಕೆಯನ್ನು ಗಂಭೀರವಾಗಿ ಪರಿಭಾವಿಸುವುದರ ಜೊತೆಗೆ ಲಭ್ಯವಾದ ಅವಕಾಶವನ್ನು ವ್ಯಷ್ಟಿ ಸಮಷ್ಟಿಗಳ ಕಲ್ಯಾಣಕ್ಕೆ ಬಳಸುವುದು ಅಪೇಕ್ಷಣೀಯ. ಅಧಿಕಾರ ಹಣ ಭೋಗಜೀವನದ ದಾಹವೇ ಪರಮ ಗುರಿಯೆಂದು ಭಾವಿಸುತ್ತಿರುವ ಸಧ್ಯದ ಪರಿಸ್ಥಿತಿಯಲ್ಲಿ ಮಾಜಿ ಶಾಸಕರಾದ ಶ್ರೀಶಂಕರಶೆಟ್ಟರಂತಹ ನಿಸ್ವಾರ್ಥಸೇವಾನಿಷ್ಠರು ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತ ಮುಂದುವರಿದಿರುವುದು ಶ್ಲಾಘ್ಯ.

ಶ್ರೀಶಂಕರಶೆಟ್ಟಿ ಪಾಟೀಲರಿಗೆ ಬಸವಾದಿ ಪ್ರಮಥರು ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸುತ್ತೇವೆ.

**ಶ್ರೀಮನ್ನಿರಂಜನ ಜಗದ್ಗುರು ತೋಂಟದ** ಡಾ.ಸಿದ್ಧಲಿಂಗ ಸ್ವಾಮಿಗಳು

ಶ್ರೀಜಗದ್ಗುರು ತೋಟದಾರ್ಯ
ಸಂಸ್ಥಾನಮಠ ಡಂಬಳ,
ಗದಗ (ಕರ್ನಾಟಕ)

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ

**-ಕೂಡಲಸಂಗಮದೇವಾ**

ಕಲಬುರ್ಗಿ ಜಿಲ್ಲೆಯ ಕಮಲಾಪೂರ ಗ್ರಾಮದ ಶ್ರೀಶಂಕರಶೆಟ್ಟಿ ಪಾಟೀಲರು ಆದರ್ಶ ಶಾಸಕರಾಗಿ ಕಲ್ಯಾಣನಾಡಿನ ಸಾರ್ವನಿಕ ಕ್ಷೇತ್ರದಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿ ಜನಪ್ರಿಯ ಮುಂದಾಳುಗಳೆನಿಸಿದ್ದಾರೆ. ಪ್ರಾಮಾಣಿಕ ದಕ್ಷ,ಸತ್ಯಶುದ್ಧ ಕಾಯಕದಿಂದ ನಿಜ ಶರಣರಾಗಿ ಸಾಮಾಜಿಕ ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ್ದಾರೆ.

ತೊಂಬತ್ತರ ಈ ಇಳಿವಯಸ್ಸಿನಲ್ಲಿಯೂ ಮಾಜಿ ಶಾಸಕರಾದ ಶ್ರೀಶಂಕರಶೆಟ್ಟಿ ಪಾಟೀಲರು ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಸಂತೋಷದ ಹಾಗೂ ಹೆಮ್ಮೆಯ ಸಂಗತಿ ಶ್ರೀಪಾಟೀಲರು ನೂರು ಕಾಲ ವರುಷ ನೆಮ್ಮದಿಯಿಂದ ಬಾಳಲೆಂದು ಹಾರೈಸುವೆವು.

**ಷ. ಬ್ರ.ಶ್ರೀಚನ್ನವೀರ ಶಿವಾಚಾರ್ಯರು**
ಸಂಸ್ಥಾನ ಹಿರೇಮಠ, ಹಾರಕೂಡ
ಜಿ.ಬೀದರ (ಕರ್ನಾಟಕ)

"————ಶ್ರೀಶಂಕರ ಶೆಟ್ಟಿ ಪಾಟೀಲರು ಇಷ್ಟಲಿಂಗಧಾರಿಗಳು, ನಿರಾಡಂಬರ ಜೀವಿಗಳು, ಗೌಡರ ಉಚ್ಚ ವಿಚಾರಗಳು, ಪರೋಪಕಾರಕ್ಕಾಗಿ ತಮ್ಮನ್ನು ಸಮಾಜಕ್ಕೆ, ರಾಷ್ಟ್ರಕ್ಕೆ, ಅರ್ಪಿಸಿಕೊಂಡವರು. ಕಮಲಾಪೂರ ಗ್ರಾಮದ ಗೌಡರಾಗಿ, ಕಾಂಗ್ರೆಸ್ಸಿನ ನಿಷ್ಠಾವಂತ ಕಾರ್ಯಕರ್ತರಾಗಿ, ಈ ಭಾಗದ (ಕಾಳಗಿ) ಶಾಸಕರಾಗಿ ಸಮಾಜದ, ನಾಡಿನ ಸರ್ವತೋಮುಖದ

ಅಭಿವೃದ್ಧಿಗಾಗಿ ಹಗಲಿರುಳೂ ಶ್ರಮಿಸಿದವರು. ಬಡವರ ದೀನ ದಲಿತರ ಉದ್ಧಾರಕ್ಕಾಗಿ ದುಡಿದವರು. ಬಡವ ಬಲ್ಲಿದರಿಗೂ ಎಲ್ಲ ಜಾತಿ ಮತ ಪಂಥದವರಿಗೂ ನೆಚ್ಚಿನ ನಾಯಕರು, ಜನಾನುರಾಗಿಗಳು.

ಶ್ರೀಶಂಕರ ಶೆಟ್ಟಿ ಪಾಟೀಲರದು ಶುದ್ಧಮನಸ್ಸು, ಕರಶುದ್ಧ, ಬಾಯಿ ಶುದ್ಧ, ವಿಚಾರ ಪ್ರಿಯರು, ಆಚಾರವಂತರು. ಸದೃಢ ಕಾಯದ ಅಂತಃ ಕರುಣಿ, ಅಪಾರ ಬಂಧು ಬಳಗ, ಮಕ್ಕಳು ಮೊಮ್ಮಕ್ಕಳು, ದನ ಕರ ಧವಸ ಧಾನ್ಯಗಳಿಂದ ತುಂಬಿದ ಮನೆ, ಮನಸ್ಸೂ ಅಷ್ಟೇ ವಿಶಾಲ.

ಹಗಲಿರುಳೂ ಸಮಾಜ ಸೇವೆಗಾಗಿ ಶ್ರಮಿಸುತ್ತಿರುವ ಗೌಡರ ಕೈಬಲಪಡಿಸುವಲ್ಲಿ ಅವರ ಸೌಭಾಗ್ಯವತಿ ರಂಗಮ್ಮನವರ ಪಾತ್ರ ಮೆಚ್ಚುವಂತಹದು. ಸತಿ ಪತಿಗಳೊಂದು ಆಗಿದ್ದ ಇವರ ಜೀವನ ಕಾಯಕ ದಾಸೋಹಮಯ. ಇವರ ಮೇಲಿಟ್ಟ ಪ್ರೀತಿ ವಿಶ್ವಾಸಗಳ ದ್ಯೋತಕವಾಗಿ ಈ ಭಾಗದ ಮಹಾಜನತೆ ಶ್ರೀಶಂಕರಶೆಟ್ಟಿ ಪಾಟೀಲರ ಎಂಬತ್ತನೆಯ ವಯಸ್ಸಿನಲ್ಲಿ ವರ್ಧಂತಿ ಮಹೋತ್ಸವ ಜರುಗಿಸಿ, ಅಭಿನಂದನಗ್ರಂಥ ಅರ್ಪಿಸಿದುದು ಅಭಿಮಾನದ ಸಂಗತಿ.

**ಶ್ರೀಮ.ಘ.ಚ.ಬಸವಲಿಂಗ ಪಟ್ಟದೇವರು**

ಹಿರೇಮಠ ಸಂಸ್ಥಾನ ಭಾಲ್ಕಿ

——————ಶಂಕರಶೆಟ್ಟಿ ಪಾಟೀಲರು ಅಪ್ಪ ಬಸವಣ್ಣನವರ ಅಪ್ಪಟ ಬಸವಭಕ್ತರಾಗಿದ್ದಾರೆ. ಎಡದ ಕೈಯಲ್ಲಿ ಲಿಂಗಪೂಜೆ ಬಲದಕೈಯಲ್ಲಿ ಜಂಗಮ ಪೂಜೆ, ಜೀವನದುದ್ದಕ್ಕೂ ಮಾಡುತ್ತ ಬಂದವರು.

ಈಗ ತೊಂಬತ್ತರ ವಯಸ್ಸಿನಲ್ಲಿಯೂ ಅವರ ಚಟುವಟಿಕೆ, ಓಡಾಟ ಅವರ ಮಾತುಗಳು ಅವರ ಕಳಕಳಿ ಇಪ್ಪತ್ತರ ಯುವಕರಿಗೆ ಮೀರಿಸುವಂತಿದೆ. ಬಸವತತ್ವ ನಿಷ್ಠಾವಂತ ಆಚರಣೆ ಬಸವತತ್ವ ಜನಮನದ ಹೃದಯಾಂತರಾಳದಲ್ಲಿ ಬಿತ್ತಬೇಕೆನ್ನುವ ಅವರ ಕಳಕಳಿ ಮೆಚ್ಚುಬೇಕಾದದ್ದು.

'ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರ ನಾನಲ. ಲೋಕವಿರೋಧಿ, ಶರಣನಾರಿಗೆಂದೂ ಅಂಜಲಾರ' ಗುರುಬಸವೇಶ್ವರರ ವಾಣಿ ಅವರ ಜೀವನದ ಆಚರಣೆಯಲ್ಲಿ ಕಾಣುತ್ತೇವೆ. ವಿನಯದ ಸಾಕಾರ ಮೂರ್ತಿಯಾಗಿದ್ದಾರೆ.

ವಿಶ್ವಗುರು ಬಸವಣ್ಣನವರ ಶ್ರೀರಕ್ಷೆ ಹಾಗೂ ಶತಾಯುಷಿ ಚನ್ನಬಸವ ಪಟ್ಟದ್ದೇವರ ಅಖಂಡ ಆಶೀರ್ವಾದ ಅವರ ಮೇಲೆ ಸದಾ ಇರಲಿ. ಅವರ ಶತಮಾನೋತ್ಸವ ಆಚರಿಸುವ ಭಾಗ್ಯ ದೇವರು ನಮಗೂ ನಿಮಗೂ ಕರುಣಿಸಲೆಂದು ಹೃದಯಪೂರ್ವಕ ಹಾರೈಸುತ್ತೇವೆ.

**ಶ್ರೀ ಮ.ನಿ.ಪ್ರ.ಶಿವಾನಂದ ಸ್ವಾಮಿಗಳು**
ಶ್ರೀಗುರುಬಸವೇಶ್ವರ ಸಂಸ್ಥಾನಮಠ ಹುಲಸೂರ
ಜಿ.ಬೀದರ (ಕರ್ನಾಟಕ)

"——————ಶ್ರೀಶಂಕರಶೆಟ್ಟಿ ಪಾಟೀಲರನ್ನು ಕಂಡರೆ ಹನ್ನೆರಡನೆಯ ಶತಮಾನದ ಶರಣರನ್ನು ಕಂಡಂತೆ ನೆನಪಾಗುತ್ತದೆ. ಹೆಸರಿಗೆ ತಕ್ಕಂತೆ ಕಿಂಕರರಾಗಿ ಶಂಕರರಾಗಿದ್ದಾರೆ. ಬಾಗಿದ ತಲೆ ಮುಗಿದ ಕೈ ಅವರ ನಿಲವು, ಆಚಾರ ವಿಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಮಾಜಕ್ಕೆ ದಾರಿದೀಪವಾಗಿದ್ದಾರೆ.

ತೊಂಬತ್ತರ ಇಳಿವಯಸ್ಸಿನ ಅವರ ಬದುಕು ತತ್ವನಿಷ್ಠ, ಶರಣರ ಸಿದ್ಧಾಂತ, ನಿರ್ಭೀತ ವಿಚಾರ, ಸಮಾಜ ಉದ್ಧಾರದ ಕಳಕಳಿ ಇವುಗಳಿಂದ ವೈಶಿಷ್ಟ್ಯಪೂರ್ಣವಾದ ವ್ಯಕ್ತಿಯಾಗಿ ಜನಮನ ಕಣ್ಮಣಿಯಾಗಿ ಕಂಗೊಳಿಸುತ್ತಾರೆ. ಅವರನ್ನು ಕಂಡರೆ ನಮಗೂ ಸಹ ಸ್ಫೂರ್ತಿ ಬರುತ್ತದೆ.

ಧರ್ಮಗುರು ಬಸವಣ್ಣನವರು ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಲದೆ ಎಂಬ ವಾಣಿಯಂತೆ ತೊಂಬತ್ತು ವರುಷ ಲೇಸಿನ ಬದುಕು ಬಸವ ನಾಡಿನಲ್ಲಿ ಕಲ್ಯಾಣ ಕರ್ನಾಟಕ ಮರೆಯಲಾಗದ ಶಕ್ತಿಯಾಗಿ ನಮ್ಮೆಲ್ಲರ ಮುಂದೆ ನೂರಾರು ವರುಷ ಬಾಳಿ ಬದುಕಿ ಈ ಸಮಾಜಕ್ಕೆ ಮಾರ್ಗದರ್ಶನ ನೀಡಲೆಂದು ತುಂಬು ಹೃದಯದಿಂದ ಹಾರೈಸುತ್ತೇವೆ.

**೮೦.ಪಂಡಿತ ನಾಗಭೂಷಣ ಶಾಸ್ತ್ರಿ**

ಧಾರವಾಡ

"—————ಶ್ರೀಶಂಕರಶೆಟ್ಟಿಯವರು ಪ್ರಾಮಾಣಿಕರು. ಸತ್ಯಶುದ್ಧ ಕಾಯಕ ತತ್ಪರರು, ಸಮಾಜ ಸೇವಾದುರಂಧರರೂ, ಧರ್ಮ ತತ್ವಾಭಿಮಾನಿಗಳೂ, ಶಿವಶರಣರ ಸಂಸ್ಕೃತಿಯಲ್ಲಿ ಅಪಾರ ಶ್ರದ್ಧೆಯನ್ನಿರಿಸಿದವರೂ, ಅಷ್ಟೇ ರಾಜಕೀಯ ಕ್ಷೇತ್ರದಲ್ಲಿಯೂ ಅಭೂತಪೂರ್ವ ಸೇವೆ ಸಲ್ಲಿಸಿದವರೂ, ಸರ್ವಜನಾನುರಾಗಿಗಳಾದವರೂ, ಸ್ವಧರ್ಮದಲ್ಲಿ ನಿಷ್ಠೆ, ಪರಧರ್ಮ ಸಹಿಷ್ಣುತೆಯನ್ನು ಅಳವಡಿಸಿಕೊಂಡವರು ಆಗಿರುವರು.

ಮಾನವ ಸೃಷ್ಟಿಯಲ್ಲಿ ನಿರ್ಮಿತವಾದ ಇಂದ್ರಿಯಗಳು ಬರಿ ಮೂಕನಾಗಿರುವವು. ಅದಕ್ಕಾಗಿ ಮನುಷ್ಯನಿಗೆ ಅಂತರಾತ್ಮ ಜ್ಞಾನವಾಗುವದು ಕಠಿಣ. ಒಬ್ಬಾನೊಬ್ಬ ಧೀರವ್ಯಕ್ತಿಯು ಮಾತ್ರ ಆ ಇಂದ್ರಿಯಗಳನ್ನು ಅಂತರ ಮುಖಮಾಡಿ ಆತ್ಮ ಜ್ಞಾನವನ್ನು ಪಡೆಯುವನು ಎಂಬುದು ಸರ್ವಸತ್ಯ. ಶ್ರೀ ಶಂಕರಶೆಟ್ಟಿ ಪಾಟೀಲರು ಪುಣ್ಯವಿಶೇಶದಿಂದ ವೀರಶೈವ ಧರ್ಮದಲ್ಲಿ ಜನಿಸಿರುವರು. ಇವರು ಮಹಾಭಾಗ್ಯವಂತರು.

**ಡಾ.ಬಿ.ಡಿ.ಜತ್ತಿ**

ಮಾಜಿ ಉಪರಾಷ್ಟ್ರಪತಿಗಳು

ಶಿವಾನಂದ ೨೨೪,ರಮಣ ಮಹರ್ಷಿ ರಸ್ತೆ,

ಬೆಂಗಳೂರು-೮೦.

ಶ್ರೀ ಶಂಕರ ಶೆಟ್ಟಿ ಪಾಟಿಲರು ನನಗೆ ಚಿರಪರಿಚಿತರು. ಅವರು ವಿಧಾನಸಭೆ ಸದಸ್ಯರಾಗಿರುವಾಗ ಅವರ ನಿಕಟ ಸಂಪರ್ಕವಾಯಿತು. ಅವರು ಅಪ್ಪಟ ಪ್ರಾಮಾಣಿಕರು, ನೀತಿವಂತರು. ವಿಧಾನಸಭಾ ಸದಸ್ಯರಾಗಿ ತಮ್ಮ ಕ್ಷೇತ್ರದ ಜನ ಹಿತದ ಕಾರ್ಯವನ್ನು ಬಹಳ ಚೆನ್ನಾಗಿ ಮಾಡಿದ್ದಾರೆ. ಅವರು ನಿಜವಾಗಿ ಒಬ್ಬ ಸಾತ್ವಿಕ ಶರಣರು. ತಮ್ಮ ಜೀವನದಲ್ಲಿ ಶರಣರು ತೋರಿದ ಕಾಯಕ ದಾಸೋಹ ತತ್ವವನ್ನು ಕಾರ್ಯರೂಪಕ್ಕೆ ತಂದವರು.

**ವೀರೇಂದ್ರ ಪಾಟೀಲ**
ಮಾಜಿ ಮುಖ್ಯಮಂತ್ರಿಗಳು
೧೭-೪-ನೇ ಮುಖ್ಯ ರಸ್ತೆ, ೨ನೇ ಅಡ್ಡ ರಸ್ತೆ
ರಾಜಮಹಲ್ ಬಡಾವಣೆ ಬೆಂಗಳೂರು-೮೦.

"ಶ್ರೀಶಂಕರಶೆಟ್ಟಿ ಪಾಟೀಲರು ಆದರ್ಶ ಶಾಸಕರಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ನಿಸ್ವಾರ್ಥ ಸೇವೆಸಲ್ಲಿಸಿದ್ದಾರೆ. ದೇವರು ಅವರಿಗೆ ಸಾರ್ವಜನಿಕ ಕ್ಷೇತ್ರದಲ್ಲಿ ಇನ್ನೂ ಹೆಚ್ಚಾಗಿ ಸೇವೆಸಲ್ಲಿಸುವಂತೆ ಹರಸಲಿ.

**ಎಂ.ಪಿ.ಪ್ರಕಾಶ**
ಮಂತ್ರಿಗಳು
ವಿಧಾನಸೌಧ ಬೆಂಗಳೂರು-೫

"————ಕಲಬುರ್ಗಿ ಜಿಲ್ಲೆ ಕಮಲಾಪೂರ ಗ್ರಾಮದ ಶ್ರೀಶಂಕರಶೆಟ್ಟಿ ಪಾಟೀಲರು ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಪಾರಸೇವೆ ಸಲ್ಲಿಸಿ, ಜನಪ್ರಿಯತೆಯನ್ನು ಗಳಿಸಿರುವ ಶ್ರೀಯವರ ಕಾರ್ಯಕ್ಷಮತೆ,ನಿಸ್ಪೃಹ ಸೇವಾ ಮನೋಭಾವನೆ ನಿಜಕ್ಕೂ ಸ್ತುತ್ಯಾರ್ಹವಾದುದು.

**ಶ್ರೀವಿಶ್ವನಾಥರೆಡ್ಡಿ ಮುದ್ನಾಳ**
ಮಾಜಿ ಮಂತ್ರಿಗಳು
ಯಾದಗಿರ ಜಿ.ಗುಲಬರ್ಗಾ

ಕ್ರಿ.ಶ.೧೯೪೭ರ ಏಪ್ರಿಲ್ ಸುಮಾರಿನಲ್ಲಿ ನಿಜಾಂ ಪ್ರಾಂತೀಯ ವೀರಶೈವ ಪರಿಷತ್ತಿನ ಏಳನೆಯ ಅಧಿವೇಶನ ಜರುಗಿದಾಗ ಅಲ್ಲಿ ಶ್ರೀ ಶಂಕರಶೆಟ್ಟಿಯವರನ್ನು ಪ್ರತ್ಯಕ್ಷನೋಡುವ, ಅವರ ಪ್ರಾಮಾಣಿಕ ಪರಿಶ್ರಮ ಅರಿಯುವ ಅವಸರ ನನಗೆ ಲಭಿಸಿತ್ತು.

ಹೈದ್ರಾಬಾದ ನಗರದಲ್ಲಿ ನಿರ್ಮಾಣ ಹಂತದಲ್ಲಿದ್ದ ವೀರಶೈವ ವಿದ್ಯಾರ್ಥಿ ವಸತಿಗೃಹದ ಕೆಲಸವನ್ನು ಕೈಗೆತ್ತಿಕೊಂಡು ದೇಣಿಗೆ ಪಡೆಯಲು ಕಮಲಾಪೂರಕ್ಕೆ ಹೋಗಿದ್ದೆವು. ಆಗ ನಾವು ಹೋಗುವ ಪೂರ್ವದಲ್ಲಿಯೇ ಶ್ರೀಮಂತ ಸಮಾಜಾಭಿಮಾನಿಗಳನ್ನು ಸಂಪರ್ಕಿಸಿ ಇಷ್ಟಿಷ್ಟು ಹಣ ಕೊಡಬೇಕೆಂದು ನಿಗದಿ ಪಡಿಸಿರುತ್ತಿದ್ದರು. ನಾವು ಹೋದ ಒಂದು ತಾಸಿನಲ್ಲಿಯೇ ಪಟಾಫಟ್ ಹಣ ಸಂಗ್ರಹಿಸಿ ಕೊಟ್ಟು ಬಿಡುತ್ತಿದ್ದರು. ಯಾರಾದರೂ ಮಹನೀಯರು ವಾಗ್ದಾನ ಮಾಡಿದರೆ ಅವರ ಪರವಾಗಿ ತಾವೇ ಹಣಕೊಟ್ಟು ಆಮೇಲೆ ಅವರಿಂದ ಪಡೆದುಕೊಳ್ಳುತ್ತಿದ್ದರು.

**ಜಿ.ರಾಮಕೃಷ್ಣ**
ಮಾಜಿ ಮಂತ್ರಿಗಳು
ಕರ್ನಾಟಕ ಸರಕಾರ ಬೆಂಗಳೂರು.

ಮಾನ್ಯಶ್ರೀಶಂಕರಶೆಟ್ಟಿ ಪಾಟೀಲರು ಸರಳ ಜೀವಿಗಳು, ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ತತ್ವಗಳನ್ನು ಆಚರಿಸಿಕೊಂಡು ಹೋಗುವವರಲ್ಲಿ ಒಬ್ಬರಾಗಿರುತ್ತಾರೆ. ಇವರು ಬಹಳ ಸರಳ ಸ್ವಭಾವದವರಾಗಿದ್ದು, ಪ್ರತಿಯೊಬ್ಬರ ನೋವು ತನ್ನ ನೋವೆಂದು ಅರಿತು ಮತ್ತು ಹಿಂದುಳಿದ ಈ ಹೈದ್ರಾಬಾದ ಕರ್ನಾಟಕದ ಸರ್ವತೋಮುಖ ಏಳಿಗೆಗಾಗಿ ಸೇವೆಸಲ್ಲಿಸುತ್ತ ಬಂದಿರುವ ಮಹಾನ್ ವ್ಯಕ್ತಿಗಳಲ್ಲಿ ಇವರೊಬ್ಬರಾಗಿರುತ್ತಾರೆ.

ರಾಜಕೀಯ ಜೀವನದಲ್ಲಿ ಮುಂದೆ ಬೆಳೆಯುತ್ತಿರುವ ಜನನಾಯಕರು ಇವರ ಆದರ್ಶಜೀವನವನ್ನು ಮೈಗೂಡಿಸಿಕೊಂಡು ಸೇವೆ ಸಲ್ಲಿಸಲು ಇವರ ಸರಳಜೀವನ ಮಾರ್ಗದರ್ಶನವಾಗಲೆಂದು ಆಶಿಸುತ್ತೇನೆ.

**ಬಸವರಾಜ ಪಾಟೀಲ, ಸೇಡಂ**

ಮಾಜಿ ಸಂಸದರು

——ಉದಾತ್ತ ಬಾಳನ್ನು ನೀಡಿದ ಮಾಜಿ ಶಾಸಕರಾದ ಶ್ರೀಶಂಕರಶೆಟ್ಟಿ ಪಾಟೀಲ ಅವರ ಬದುಕು ಶತಾಯು ಆಗಿ ನಾಡು ನುಡಿಗೆ ಇನ್ನೂ ಹೆಚ್ಚು ಹೆಚ್ಚು ಸೇವೆ ಸಲ್ಲಿಸುವಂತಾಗಲಿ.

**ಬಸವರಾಜ ಭೀಮಳ್ಳಿ ಅಧ್ಯಕ್ಷರು**

ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆ

ಗುಲಬರ್ಗಾ .

ಹೈದ್ರಾಬಾದ ಕರ್ನಾಟಕ ಗಂಡುಮೆಟ್ಟಿನ ನೆಲವೆಂದೇ ಖ್ಯಾತವಾದ ಕಮಲಾಪೂರ ಗ್ರಾಮದಲ್ಲಿ ಹುಟ್ಟಿ ಬೆಳೆದ ಶ್ರೀಶಂಕರಶೆಟ್ಟಿ ಪಾಟೀಲರು ಶಾಸಕರಾಗಿ, ಈ ಭಾಗದ ಜನತೆಯ ಆಶೋತ್ತರಗಳನ್ನು ದಕ್ಷ ಪ್ರಾಮಾಣಿಕ ಮತ್ತು ಶ್ರದ್ಧೆಯಿಂದ ಸೇವೆಸಲ್ಲಿಸಿದ ಮಹಾನುಭಾವರು. ಪ್ರೇಮಮಯಿ ಶುದ್ಧ ವ್ಯಕ್ತಿತ್ವ ಪಡೆದ ಧೀಮಂತ ನಾಯಕರಾಗಿ ರಾಜಕೀಯ ಕ್ಷೇತ್ರದಲ್ಲಿ ಸಾರ್ವಜನಿಕರಿಗೆ ಹಿತವಾಗುವಂತಹ ಕೆಲಸ ಮಾಡಿ ಎಲ್ಲರ ಹೃನ್ಮನಗಳನ್ನು ಗೆದ್ದಿದ್ದಾರೆ.

ಶ್ರೀಶಂಕರಶೆಟ್ಟಿ ಪಾಟೀಲರು ತಮ್ಮ ತೊಂಬತ್ತರ ಈ ಇಳಿವಯಸ್ಸಿನಲ್ಲಿಯೂ ಯುವಕರಲ್ಲಿ ಯುವಕರಾಗಿ, ಹಿರಿಯರಲ್ಲಿ ಹಿರಿಯರಾಗಿ ಕೆಲಸ ಮಾಡುತ್ತಾ ತಮ್ಮ ನಿತ್ಯ ಜೀವನದ ಕಾರ್ಯವನ್ನು ಎಲ್ಲರಿಗೂ ಸದುಪಯೋಗವಾಗುವ ರೀತಿಯಲ್ಲಿ ಮುನ್ನಡೆಸಿದ್ದಾರೆ.

**ಶರಣಯ್ಯ ಸ್ವಾಮಿ, ಮಹಾಗಾಂವ**

ಗಂಜ ಕಾಲನಿ

ಗುಲಬರ್ಗಾ.

——ಶ್ರೀಶಂಕರಶೆಟ್ಟಿ ಅವರಂತಹ ಪ್ರಾಮಾಣಿಕ ವ್ಯಕ್ತಿಗಳು ಭಾರತದೇಶದಲ್ಲಿ ಕೋಟಿಗೊಬ್ಬ , ಶ್ರೀಶಂಕರ ಶೆಟ್ಟಿ ಪಾಟೀಲರ ಜೀವನವು ಬಾಲ್ಯದಿಂದಲೇ ಸರಳ, ಶುದ್ಧ ಹಾಗೂ ನೀತಿಯುಕ್ತವಾಗಿ ಮಾರ್ಪಡಿಸುತ್ತ ಸ್ವಾಭಾವಿಕವಾಗಿ ಬೆಳೆದು ಬಂದಂತಿದೆ. ವಿದ್ಯಾರ್ಥಿ ಜೀವನದಿಂದ ಪ್ರಾರಂಭವಾಗಿ ಗೃಹಸ್ಥಾಶ್ರಮದ ನೂಕುನುಗ್ಗಲುಗಳಲ್ಲಿಯೂ ಸಾಮಾಜಿಕ ಧಾರ್ಮಿಕ ಹಾಗೂ ರಾಜಕೀಯ ಹೋರಾಟಗಳಲ್ಲಿಯೂ ಧೃತಿಗೆಟ್ಟವರಲ್ಲ. ತಾಳ್ಮೆ ತಪ್ಪಿದವರಲ್ಲ. ಅಕ್ರಮ ಜೀವನಕ್ಕೆ ಇಳಿದವರಲ್ಲ.

ಎಂದಿಗೂ ಶಾಂತಿ ಸಮಾಧಾನ ಸಮತೂಕ ಮತ್ತು ಪರಿಶುದ್ಧ ಜೀವನ ಸಾಗಿಸುತ್ತ ಬಂದಿರುವುದು ಇಂದಿನವರೆಗೂ ಕಣ್ಣಾರೆ ನೋಡುತ್ತಲೇ ಬಂದಿದ್ದೇವೆ, ಶ್ರೀಪಾಟೀಲರು ಸತ್ಯ ಸಾತ್ವಿಕ ಶಿಖಾಮಣಿಗಳು ಮನು ಕುಲದ ಪುರುಷೋತ್ತಮರು.——

ಶ್ರೀಶಂಕರಶೆಟ್ಟಿ ಪಾಟೀಲರಿಗೆ ವಿರೋಧಿಗಳೇ ಇಲ್ಲವೆಂದು ಹೇಳಬೇಕು. ಏನೋ ಅಲ್ಪ ಸ್ವಲ್ಪ ಕೆಲವು ಜನಗಳು ವಿರೋಧವಾಗಿದ್ರೆ ಅವರು ತಮ್ಮ ಸ್ವಾರ್ಥ ನೆರವೇರದಿದ್ದಕ್ಕಾಗಿ ಅಸೂಹೆ ಪಡುತ್ತಿರುವರೇ ಹೊರತು ಮತ್ತೇನೂ ಕಾರಣಗಳಿಲ್ಲ. ಆದರೆ ಪಾಟೀಲರ ಹೃದಯದಲ್ಲಿ ಮಾತ್ರ ಯಾರ ಬಗ್ಗೆಯೂ ತಿಲಮಾತ್ರ ವಿರೋಧವಿಲ್ಲ. ಅವರು ಅಜಾತ ಶತ್ರುಗಳಂತೆ ಜೀವಿಸುತ್ತಿರುವರು.

## ಸಿದ್ಧವೀರಯ್ಯ ಬಂಡೆಬೆಂಬಳ:

ಶ್ರೀಶಂಕರಶೆಟ್ಟಿ ಪಾಟೀಲರು ಶ್ರೀಮಂತ ಮನೆತನದ ಸತ್ಪುತ್ರರು. ಆದರೂ ದಣುವಿಲ್ಲದ ದುಡಿಮೆಯೆ ಇವರ ಉಸಿರು. ಪರಸೇವೆಯೆ ಇವರ ಪ್ರಾಣ, ದೀನ ದಲಿತರ ಸೇವೆಯೇ ಇವರ ಲಿಂಗಪೂಜೆ. ನೊಂದ ಜೀವಿಗಳ ನೋವೇ ಇವರ ಸ್ವಂತ ನೋವು, ಇವರ ಕರುಣೆ ಕಡಲಷ್ಟು ಅಪಾರವಾಗಿದೆ. ಮಮತೆ ಮಹಾಮೇರುವಿನಷ್ಟು ಎತ್ತರವಾಗಿದೆ. ಇಂದು ಇವರು ತಮ್ಮ ಇಳಿ ವಯಸ್ಸಿನಲ್ಲಿಯೂ ಇಪ್ಪತ್ತರ ಹರೆಯದ ಮುಖಲಕ್ಷಣವು ಕಾರ್ಯೋತ್ಸಾಹವನ್ನು ಪ್ರಕಟಿಸುವದು. ಇವರ ಪ್ರಬುದ್ಧ ಪುತ್ರರು ಇವರಷ್ಟೇ ದೊಡ್ಡವರಾಗಿರುವರು. ಇವರು ರೋಗಪೀಡಿತರಾಗಿ ದವಾಖಾನೆಯಲ್ಲಿ ಬಿದ್ದದ್ದನ್ನು ನಾನು ಕೇಳೆ ಇಲ್ಲ,. ಕಂಡಿಲ್ಲ. ಕಲ್ಲೂ ತಿಂದು ಕಲ್ಲು ಅರಗಿಸಿಕೊಳ್ಳುವ ಇವರ ಪಾಚಕ ಶಕ್ತಿ ಬಲವಾದದ್ದು. ಶ್ರೀಶಂಕರಶೆಟ್ಟಿ ಪಾಟೀಲರದು ದೊಡ್ಡಮನಸ್ಸು, ಗಟ್ಟಿದೇಹ, ಹೊಯ್ದಾಟವಿಲ್ಲದ ಸಂಕಲ್ಪ, ಸಕಾಲದ ಸಿದ್ಧತೆ ನಿಸರ್ಗದ ನಿರ್ಭೀತಿ ಇವೆಲ್ಲವುಗಳನ್ನು ದೇವನಿಂದ ಪಡೆದಿರುವರು. ಸಮಾಜರೂಪಿ ಶಿವನನ್ನು ಒಲಿಸ ಬಂದ ಇವರ ಕಾಯ ಪ್ರಸಾದಕಾಯ.

**ಶಂಕ್ರಯ್ಯ ಚಿದ್ರೆ**
ಸಹನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ
ಬೆಂಗಳೂರು.

——ವ್ಯಕ್ತಿತ್ವದ ಎರಡು ಸ್ತಂಭಗಳೆಂದರೆ ಚಾರಿತ್ರ್ಯ ಹಾಗೂ ಸಂಭಾಷಣೆ. ಬಾಯಿ ಬಿಚ್ಚಿದರೆ ಬ್ರಹ್ಮಾಂಡ ಎನ್ನುವಂತೆ ನಾಲ್ಕು ಮಾತುಗಳನ್ನಾಡಿದ ಕೂಡಲೇ ವ್ಯಕ್ತಿತ್ವದ ಪರಿಚಯವಾಗುತ್ತದೆ. ನಾಲಿಗೆ ತನ್ನ ಕುಲವನರಹುವುದೆನ್ನುವಂತೆ ಶ್ರೀಶಂಕರಶೆಟ್ಟಿ ಪಾಟೀಲರು ಆಡುವುದು ಮೃದು ಮಧುರ ಪ್ರಿಯವಾದ ಮಾತುಗಳು ಸಹ ಅವರ ಉದಾತ್ತವ್ಯಕ್ತಿತ್ವದ ಕುರುಹುಗಳಾಗಿವೆ. ಪ್ರೇಮ,ಪ್ರೀತಿ,ವಿಶ್ವಾಸ, ಪರೋಪಕಾರ, ಸೇವಾಭಾವನೆ, ಸಮಾಜಸೇವೆ ಅವರ ಜೀವನ ಕ್ರಮಗಳಾಗಿವೆ. ಇದಕ್ಕೂ ಮೇಲಾಗಿ ಅವರ ಸಹಜ ಹಾಗೂ ನಿರಾಡಂಬರದ ಜೀವನ ಅವರ ವ್ಯಕ್ತಿತ್ವಕ್ಕೆ ಕಳಶಪ್ರಾಯವಾಗಿದೆ.

ಶ್ರೀ ಶಂಕರ ಶೆಟ್ಟರನ್ನು ಕಂಡ ಮೂಕನೂ, ಮೂಕಂ ಕರೋತಿ ವಾಚಾಲಂ ಎಂಬಂತೆ ಮಾತನಾಡುತ್ತಾನೆ ಈ ಒಂದು ಪುಟ್ಟ ಗ್ರಾಮದಿಂದ ಹೊರಟ ಸ್ನೇಹವಾಹಿನಿ ನಾಡಿನಾದ್ಯಂತ, ದೇಶಾದ್ಯಂತ ಹರಡಲಿ. ಶ್ರೀಯುತರು ಈ ಬಾಳ್ವೆಯ ಸವಿಯನ್ನು ಎಲ್ಲರಿಗೂ ಹಂಚುತ್ತ ಸಾವಿರವಾಗಲಿ,

**ಡಾ.ಶಶಿಕಲಾ ಮೋಳ್ದಿ**
ನಿವೃತ್ತ ಪ್ರಾಧ್ಯಾಪಕರು
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ.

——ಸರಳವಾದ ನಡೆನುಡಿ, ಸರಳ ಸ್ವಭಾವದ ಶಂಕರಶೆಟ್ಟಿ ಕಾಕಾ ಅವರು ಸರಳತೆಯ ಪ್ರತೀಕವಾಗಿದ್ದಾರೆ. ಮಕ್ಕಳು ಮುದುಕರು, ಹೆಂಗಸರು ನೆರವನ್ನು ಬಯಸುವ ಗಂಡಸರು ಯಾರೇ ಹೋಗಿ ಕೇಳಿದರೂ ಅವರ ನೆರವಿಗೆ ಸದಾ ಸಿದ್ಧರಾಗಿರುತ್ತಾರೆ. ಇವತ್ತಿಗೂ ಈ ವಯಸ್ಸಿನಲ್ಲಿಯೂ ಅನ್ಯರ ಕೆಲಸಕ್ಕಾಗಿ ಅವರು ಸಾಕಷ್ಟು ಓಡಾಡುತ್ತಾರೆ. ದೊಡ್ಡ ವ್ಯಕ್ತಿಯೆ ಹೇಳಬೇಕು. ದೊಡ್ಡ ಕೆಲಸವೆ ಆಗಬೇಕೆಂಬ ಹಮ್ಮುಬಿಮ್ಮು ಅವರಿಗಿಲ್ಲ. ಕೆಲಸದಲ್ಲಿ ಹಿರಿದು ಕಿರಿದೆಂಬ ಭೇದ ಭಾವವಿಲ್ಲ. ಸಮಸ್ಯೆಯಿದೆ, ಸರಿಪಡಿಸಬೇಕು ಇಷ್ಟೇ ಅವರು ಯೋಚಿಸುವುದು. ಅದಕ್ಕೆ ತಕ್ಕಂತೆ

ಕೆಲಸದಲ್ಲಿ ತೊಡಗುವುದು, ಕೈಕೊಂಡ ಕಾರ್ಯ ಕೈಗೂಡುವವರೆಗೆ ಕೋರ್ಟು ಕಛೇರಿ, ಕಟ್ಟೆ, ಚಾವಡಿ, ಆಫೀಸು ಮುಂತಾಗಿ ಅಗತ್ಯವಿದ್ದಲ್ಲಿಗೆ ಎಡೆಬಿಡದೆ ತಿರುಗಿ ಮತ್ತೆಮತ್ತೆ ವಿಚಾರಿಸುತ್ತಾ ಇದ್ದು ಕೆಲಸ ಮಾಡಿಕೊಳ್ಳುವರು. ಬೇಸರಿಸದೆ ಅಧಿಕಾರಿಗಳಿಗೆ ಭೇಟಿಯಾಗಿ ಕೆಲಸವಾಗಲು ಪ್ರಯತ್ನಿಸುವರು.

ಸಹಕಾರಿ ಕ್ಷೇತ್ರದಲ್ಲಿ ಅವರದು ದೊಡ್ಡ ಹೆಸರು, ದೀರ್ಘ ಕಾಲದ ಅನುಭವ ಅವರಿಗಿದೆ. ಎಲ್ಲರೊಡನೆ ಹೊಂದಿಕೊಂಡು ಸರಳವಾಗಿ ವರ್ತಿಸುವವರು ಶಂಕರಶೆಟ್ಟಿ ಪಾಟೀಲರು.

**ಡಾ.ಷಣ್ಮುಖಯ್ಯ ಕಂದಗೂಳ**
ಹಿಂದಿ ಪ್ರಾಧ್ಯಾಪಕರು (ನಿವೃತ್ತ)
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

——ಕಮಲಾಪೂರದ ಶ್ರೀ ಶಂಕರ ಶೆಟ್ಟಿ ಪಾಟೀಲರು ಹೆತ್ತ ತಂದೆ ತಾಯಿಗಳಿಗೂ, ಹುಟ್ಟಿದ ಹಳ್ಳಿಗೂ ಕೀರ್ತಿ ತಂದ ಮಹಾನ್ ವ್ಯಕ್ತಿಯಾಗಿದ್ದಾರೆ. ಇವರದು ದಾಸೋಹದ ಮನೆ, ನಿತ್ಯವೂ ನೂರಾರು ಜನರು ಈ ದಾಸೋಹದಲ್ಲಿ ಪ್ರಸಾದ ಸ್ವೀಕರಿಸಿ ಧನ್ಯರಾಗುತ್ತಲಿದ್ದರು.

ಶ್ರೀಶಂಕರಶೆಟ್ಟಿ ಪಾಟೀಲರು ಜನ ನೀತಿವಂತರಾಗಬೇಕೆಂದು ದೂರದೂರದ ಮಹಾನುಭಾವಿಗಳನ್ನು ಪೂಜ್ಯರನ್ನು ಸಾಹಿತಿಗಳನ್ನೂ, ಗ್ರಾಮಕ್ಕೆ ಆಮಂತ್ರಿಸಿ ಸದ್ಬೋಧೆ ಕೊಡಿಸುತ್ತಿದ್ದರು. ಮುರಘಾಮಠದ ಮೃತ್ಯುಂಜಯ ಅಪ್ಪಗಳು, ಪಂ.ನಾಗಭೂಷಣ ಶಾಸ್ತ್ರಿಗಳು, ಡಾ.ಜಯದೇವಿ ತಾಯಿ ಲಿಗಾಡೆ ಮುಂತಾದವರ ಆದರ್ಶ ಆಶೀರ್ವಾದ ಭಾಗ್ಯದಿಂದ ನಾವೂ ಧನ್ಯರಾಗಿದ್ದೇವೆ.

**ಪ್ರೊ.ವಸಂತ ಕುಷ್ಟಗಿ**
ಪ್ರಾಚಾರ್ಯರು (ನಿವೃತ್ತ)
ನೂತನ ವಿದ್ಯಾಲಯ ಪದವಿ ಕಾಲೇಜು
ಗುಲಬರ್ಗಾ

ಶ್ರೀಶಂಕರಶೆಟ್ಟಿ ಪಾಟೀಲರನ್ನು ಯಾರು ಸಮೀಪದಿಂದ ನೋಡುತ್ತಾರೋ ಅವರನ್ನು ಅವರೊಬ್ಬ ಗ್ರಾಮರಾಜ್ಯದಲ್ಲಿ ನಡೆದಾಡುವ ಗಾಂಧೀಜಿಯೆಂದೇ ಗುರುತಿಸಬೇಕಾಗುತ್ತದೆ. ಅವರೊಬ್ಬ ಸೀದಾ ಸಾದಾ ಸಜ್ಜನರು. ಅಂತಹರು ನಮ್ಮ ಮಧ್ಯದಲ್ಲಿದ್ದ ಆದರ್ಶಗಳಿಗೆ ಆದರ್ಶವಾಗಿರುವುದನ್ನು ಅನುಭವಿಸಿದಾಗಲೆಲ್ಲ ಕಾಲವು ನಮ್ಮ ಮೇಲೆ ಅನುಗ್ರಹ ಮಾಡಿರುವುದನ್ನು ಅತ್ಯಂತ ಗೌರವದಿಂದ ಸ್ವೀಕರಿಸಬೇಕಾಗುತ್ತದೆ.

ಶ್ರೀಶಂಕರಶೆಟ್ಟರ ಬದುಕೇ ಒಂದು ರೋಮಾಂಚನವನ್ನು ಹುಟ್ಟಿಸುವ ಚೇತೋಹಾರಿಯಾದ ಸತ್ಯಚಿತ್ರ. ಅವರು ತಮ್ಮ ಆತ್ಮವನ್ನು ಗೌರವಿಸಿಕೊಂಡು ಇನ್ನೊಬ್ಬರ ಆತ್ಮಗಳಲ್ಲಿಯ ಪರಮಾತ್ಮನನ್ನು ಕಂಡು ಮನ ನಮಿಸಿದವರು. ಆದರೆ ಅವರೆಂದೂ ಉಪದೇಶ ನೀಡಿದವರಲ್ಲ. ಅವರ ಸಂಪರ್ಕವೆ ಬಹುಭಾಷಾ ಸರಸ್ವತಿಯಾಗಿ ನೀಡುವ ಧ್ವನಿಕಾವ್ಯ, ನೋಡುವ ಚಣಚಣದಲ್ಲಿಯೇ ಹೃದಯ ಸಂಸ್ಕಾರ ನೀಡುವ ಸಾದಾ ಸಜ್ಜನಿಕೆಯ ಪರಿ. ಅದು ಬುದ್ಧನ ಬೆಳಕು, ಬಸವನ ತೇಜಸ್ಸು, ಮಾಗಿದ ಕಣ್ಣೋಟದಲ್ಲಿ ಮೂಡಿ ಬರುವ ತ್ರಿಶೂಲಧರನ ವೇದಾಳಿಗತಿಗೂಢವಾದ ಹಾಸ.

**ಶಿವಲಿಂಗಪ್ಪ ಕುಮ್ಮಣ್ಣ**
ನ್ಯಾಯವಾದಿಗಳು
ಗುಲಬರ್ಗಾ

ಶ್ರೀಶಂಕರಶೆಟ್ಟಿ ಪಾಟೀಲರು ಬಡವರಿಗೆ, ನಿರ್ಗತಿಕರಿಗೆ ಕೈಲಾದ ಮಟ್ಟಿಗೆ ಸಹಾಯ ಮಾಡುವ ಪರೋಪಕಾರಿಗಳು. ನಮ್ಮ ಗ್ರಾಮದ ಹಾಗೂ ಸುತ್ತ ಮುತ್ತಲಿನ ಗ್ರಾಮಗಳ ಸಾವಿರಾರು ಮಕ್ಕಳ ಕಲ್ಯಾಣ ಬಯಸಿದವರು. ಸರಕಾರದಿಂದ ದೊರೆಯುವ ಎಲ್ಲ ಸವಲತ್ತುಗಳ ಸದುಪಯೋಗಪಡಿಸಿಕೊಂಡು ಗೌಡರು ಕಮಲಾಪೂರ ಗ್ರಾಮವನ್ನು ವಿದ್ಯಾಕೇಂದ್ರವನ್ನಾಗಿ ಪರಿವರ್ತಿಸಿದ್ದಾರೆ. ಯಾರು ಏನೇ ಹೇಳಲಿ ಶ್ರೀ ಶಂಕರಶೆಟ್ಟಿ ಪಾಟೀಲರು ಕಮಲಾಪೂರ ಗ್ರಾಮದ ಅಭಿವೃದ್ಧಿಗಾಗಿ ಹೋರಾಡಿದ ಧೀರರು.

ಶ್ರೀ ಶಂಕರ ಶೆಟ್ಟರು ಸಾಮಾನ್ಯ ಮಾನವರಲ್ಲ. ದೇವ ಮಾನವರೆಂದೇ ನನ್ನ ಭಾವನೆ. ಇವರು ಅಪ್ಪಟ ಗಾಂಧಿವಾದಿಗಳು. ಇವರ ನಡತೆ. ಮಾಡಿದ ಕಾರ್ಯ, ತಾಳ್ಮೆ, ಸೌಜನ್ಯಶೀಲತೆ, ನ್ಯಾಯನಿಷ್ಠುರತೆ, ಪ್ರಾಮಾಣಿಕತೆ ಸತ್ಯನಿಷ್ಠುರತೆ ಸತತ ಪ್ರಯತ್ನ ಈ ಮೊದಲಾದ ಮಾನವೀಯ ಮೌಲ್ಯಗಳು ಶ್ರೀ ಶಂಕರ ಶೆಟ್ಟಿ ಪಾಟೀಲರ ಉನ್ನತ ವ್ಯಕ್ತಿತ್ವಕ್ಕೆ ನಿದರ್ಶನವಾಗಿವೆ.

**ಶ್ರೀ ಬಿ.ಮಹಾದೇವಪ್ಪ**
ಸಂಪಾದಕರು:ಅರಿವು ಆಚಾರ,
ಗುಲಬರ್ಗಾ.

——ಅಖಿಲ ಭಾರತ ವೀರಶೈವ ಮಹಾಸಭೆಯ ೧೯ನೆಯ ಅಧಿವೇಶನ ಬಸಕಲ್ಯಾಣದಲ್ಲಿ ೧೯೫೫ರ ಜನವರಿಯಲ್ಲಿ ನಡೆದಾಗ ಅದರ ಯಶಸ್ವಿಗೆ ಶ್ರೀಬಾಬಾಸಾಹೇಬರ ಜೊತೆಗೆ ಹೆಗಲಿಗೆ ಹೆಗಲು ಕೊಟ್ಟು ದುಡಿದವರು ಶ್ರೀಶಂಕರಶೆಟ್ಟಿ ಪಾಟೀಲರು ಎಂಬುದು ಶ್ರೀಪ್ರಭುರಾವ್ ಕಂಬಳಿವಾಲೆ ಅವರಿಂದ ತಿಳಿದಾಗ ಶ್ರೀಶಂಕರಶೆಟ್ಟಿ ಪಾಟೀಲರ ಬಗ್ಗೆ ನನಗೆ ಅಭಿಮಾನ ಇಮ್ಮಡಿಗೊಂಡಿತ್ತು. ಮುನ್ನಡಿಗೊಂಡಿತ್ತು.

ಶ್ರೀಶಂಕರಶೆಟ್ಟಿ ಪಾಟೀಲರು ಗೌಡಿಕೆ, ಶ್ರೀಮಂತಿಕೆ, ಶಾಸಕತ್ವ ಮೊದಲಾದವುಗಳ ಜನಸೇವೆಗಾಗಿ ಇದ್ದವುಗಳೇ ಹೊರತು ಡೌಲು ಡಂಭಾಚಾರಕ್ಕೆ ಅಲ್ಲವೆಂದು ತಿಳಿದವರು. ಅಂತೆಯೆ ಅವರ ಜೀವನ ಒಂದು ಪಾವನ ಜೀವನ, ಅವರ ಬದುಕು ಒಂದು ಸಾರ್ಥಕ ಬದುಕು.

**ಪುಂಡಲೀಕಪ್ಪ ಮಡಿವಾಳಪ್ಪ ಚಿರಡೆ**
ನಿವೃತ್ತ ಶಿಕ್ಷಕರು
ಕಮಲಾಪೂರ (ಕರ್ನಾಟಕ)

———ಸಮಾಜದಲ್ಲಿ ಪಡೆದುದಕ್ಕಿಂತ ಕೊಟ್ಟದ್ದು ಹೆಚ್ಚಾಗಿರಬೇಕು ಎಂಬಂತೆ ಶ್ರೀಶಂಕರಶೆಟ್ಟಿ ಪಾಟೀಲರ ಜೀವನ ವೃತ್ತಿ ಅದಕ್ಕೆ ಹೊಂದಿಕೊಂಡಿದೆ. ಸಮಾಜದ ಎಲ್ಲ ಜಾತಿ ಧರ್ಮ ಪಂಥದವರ ಜೊತೆಗೆ ಪ್ರೀತಿಯಿಂದ ಹೊಂದಿಕೊಂಡ ಅವರ ಎಲ್ಲ ಕಾರ್ಯಕಲಾಪಗಳನ್ನು

ಮಾಡಿಸಿಕೊಡುವರು. ಇವರಿಗೆ ಜಾತಿ ಮುಖ್ಯವಲ್ಲ, ನೀತಿ ಮುಖ್ಯ. ನೀತಿಯುಳ್ಳವರಾಗಿದ್ದರೆ ಯಾವ ಜಾತಿಯವರೇ ಇರಲಿ ಅವರನ್ನು ಗೌರವದಿಂದ ಕಾಣುವುದು ಇವರ ಸಹಜ ಸ್ವಭಾವವಾಗಿದೆ.

——ಬಹಳಷ್ಟು ವ್ಯಕ್ತಿಗಳ ನಿತ್ಯನಿಯಮ ಧರ್ಮಪಾಲಿಸಲು ಉಪದೇಶ ಹೇಳುವರು. ಆದರೆ ಗೌಡರು ಮಾತ್ರ ಹೇಳುವುದಕ್ಕಿಂತ ನಡೆದು ತೋರಿಸಿರುವ ವ್ಯಕ್ತಿ. ಆದುದರಿಂದ ಅವರ ಜೀವನದ ಎಲ್ಲ ಮೌಲ್ಯಗಳನ್ನಾಧಿರಿಸಿ ನಾನು ಶ್ರೀಶಂಕರಶೆಟ್ಟಿ ಪಾಟೀಲ ಎನ್ನುವ ಬದಲಾಗಿ ಶಂಕರಶೆಟ್ಟಿ ಶರಣರು ಎಂದು ಸಂಬೋಧಿಸುತ್ತೇನೆ. ಇಂತಹ ಮಹಾನ್ ಶರಣರ ಜೀವನ ಮಾರ್ಗವು ಮುಂದಿನ ನಮ್ಮ ಜನಾಂಗಕ್ಕೆ ದಾರಿದೀಪವಾಗಿ ಬೆಳಗಲು ಆದರ್ಶಪ್ರಾಯವಾಗಲಿ ಎಂದು ತುಂಬು ಹೃದಯದಿಂದ ಹಾರೈಸುತ್ತೇನೆ.

**ಶ್ರೀಗುರುಪಾದಪ್ಪ ಕಶೆಟ್ಟಿ**
ನಿವೃತ್ತ ಶಿಕ್ಷಕರು
ಕಮಲಾಪೂರ (ಗುಲಬರ್ಗಾ)

———ಶ್ರೀಶಂಕರಶೆಟ್ಟಿ ಪಾಟೀಲರು ತನ್ನೂರಿನ ಜನತೆಗಾಗಿ, ಸಮಾಜದ ಅಭಿವೃದ್ಧಿಗಾಗಿ, ತನ್ನ ಭಾಗದ ಜನತೆಗಾಗಿ, ಆಶ್ರಯ ಬಯಸಿಬಂದ ಎಲ್ಲರಿಗಾಗಿ ತಮ್ಮ ಸೇವೆಯನ್ನು ಮೀಸಲಾಗಿಟ್ಟಿರುವರು. ಕಮಲಾಪೂರದ ಯಾವುದೇ ಕಲ್ಲನ್ನು ಮಾತನಾಡಿಸಿದರೆ ನೀನು ಈ ರೂಪ ತಳೆದದ್ದು ಹೇಗೆ ಎಂದು ಪ್ರಶ್ನಿಸಿದಲ್ಲಿ ಅದರಿಂದ ದೊರಕುವ ಉತ್ತರ ಶ್ರೀ ಶಂಕರ ಶೆಟ್ಟಿ ಪಾಟೀಲರಿಂದ ಎಂಬ ಉತ್ತರ ಬರುತ್ತದೆ.ಗ್ರಾಮರಾಜ್ಯ ಜೊತೆಗೆ ರಾಮರಾಜ್ಯ ಕಟ್ಟಬಯಸಿದ ಧುರೀಣರಿವರು.

ಕೇವಲ ಸಮಾಜ ಕೆಲಸಕ್ಕೆ ಅವರ ಸೇವೆ ಮೀಸಲಿರದೆ ಅವರ ಮಾರ್ಗದರ್ಶನ, ಅವರೊಂದಿಗೆ ಚರ್ಚೆ ಇವುಗಳೇ ಒಂದು ಸಂತೋಷದ ವಿಷಯ. ಆಡು ಮುಟ್ಟದ ಗಿಡವಿಲ್ಲ ಎನ್ನುವ ಹಾಗೆ ಅವರಿಗೆ ತಿಳಿಯದ ವಿಷಯವಿಲ್ಲ.

**ಕಾಶಪ್ಪ ಸಾಯಬಣ್ಣ ಘತೆನಾಯಕ**
ಕಮಲಾಪೂರ,
ಗುಲಬರ್ಗಾ.

ಹರಿಜನರೆಂದರೆ ದೂರಸರಿಯುವ ಆ ಕಾಲದಲ್ಲಿ ಗಾಂಧಿವಾದಿಗಳಾದ ಗೌಡರು ಮಾನವರೆಲ್ಲರೂ ಒಂದು, ನಮ್ಮ ನಮ್ಮಲ್ಲಿ ಭೇದ ಭಾವ ಮಾಡಬಾರದು ಎಂದು ತಿಳಿಹೇಳುತ್ತ ಮಾನವೀಯತೆಯನ್ನು ಆಚರಣೆಯಲ್ಲಿ ತೋರಿಸಿಕೊಟ್ಟ ಮಹಾತ್ಮರೆನಿಸಿದ್ದಾರೆ. ಸರಕಾರದ ಕಾಯ್ದೆ ಕಾನೂನುಗಳಿಂದ ಆಗದ ಕೆಲಸವನ್ನು ಗೌಡರು ಜನರ ಮನ ಪರಿವರ್ತನೆಗೊಳಿಸಿ ಸದ್ದುಗದ್ದಲವಿಲ್ಲದೆ ಮಹಾತ್ಮಾ ಗಾಂಧಿಯವರಂತೆ ಹರಿಜನೋದ್ಧಾರ ಕಾರ್ಯವನ್ನು ಕೈಕೊಂಡವರಾಗಿದ್ದಾರೆ.

**ಪ್ರೊ.ವೀರಣ್ಣ ಪಡಶೆಟ್ಟಿ**
ಪ್ರಾಚಾರ್ಯರು (ನಿವೃತ್ತ)
ಗುಲಬರ್ಗಾ.

ಗೌಡರು ಭಾರತೀಯರೆಲ್ಲರೂ ನಮ್ಮ ರಾಷ್ಟ್ರಪಿತ ಗಾಂಧೀಜಿಯರ ಮಾರ್ಗ ಅನುಸರಿಸಬೇಕೆಂದರು. ಅವರ ದೃಢ ಮನಸ್ಸು, ಇಟ್ಟ ಶ್ರದ್ಧೆ ಪ್ರಶಂಸನೀಯವಾಗಿದೆ. ಅವರ ಮನಸ್ಸಿಗೆ ವಿರುದ್ಧವಾದ ಕಾರ್ಯ ಯಾರಿಂದಲಾದರು ನಡೆದದ್ದಾದರೆ ವೀರಭದ್ರನ ಅವತಾರ ತಾಳುವರು. ತಪ್ಪಿತಸ್ಥ ಯಾರೇ ಆಗಲಿ ದಂಡನೆ ಕೊಡುವುದು. ಇದು ತಮ್ಮ ಪತ್ನಿಯವರಿಗೂ ಹೊರತಲ್ಲ. ಇದರಿಂದ ಇತರರು ತಪ್ಪು ಮಾಡದೇ ಜಾಗರೂಕರಾಗಿರುತ್ತಿದ್ದರು. ಅವರೆದುರಿಗೆ ಭಯ ಭಕ್ತಿಯಿಂದ ಜನರು ಬರುತ್ತಿದ್ದರೇ ಹೊರತು ಸುಳ್ಳುಗಾರಿಕೆಗೆ ಅವಕಾಶವಿರಲಿಲ್ಲ. ಅನೇಕ ಒಳಜಗಳಗಳನ್ನು ಬಗೆಹರಿಸಲು ಇವರೊಬ್ಬರೇ ಸಾಕು. ಊರಿನ ಪಂಚಾಯಿತಿ ಇವರಿಗೆ ಶಿರಬಾಗಿದೆ. ಇವರಿಗೆ ಮೊದಲು ಕೆಲಸ ಬೇಕು, ಸ್ತುತಿಗೆ (ಹೊಗಳಿಕೆಗೆ) ಒಳಗಾಗದವರಿವರು. ಪ್ರತಿಯೊಬ್ಬರಿಗೂ ಸಮಾನಾವಕಾಶ ಕೊಡುವಂತಹ ಊರಿನ ಪ್ರಮುಖರೆಂದರೆ ತಪ್ಪಾಗಲ್ಲ.

ಶ್ರೀಶಂಕರಶೆಟ್ಟಿ ಪಾಟೀಲರು ಎಷ್ಟು ವಯೋವೃದ್ಧರೋ ಅಷ್ಟೇ ಜ್ಞಾನವೃದ್ಧರೂ ಅಹುದು. ಒಬ್ಬ ವ್ಯಕ್ತಿ ಊರಿನ ಶಕ್ತಿಯಾಗಿ ಹೇಗೆ ಕಾರ್ಯವೆಸಗಬಲ್ಲ ಎಂಬುದಕ್ಕೆ ಇವರ ಜೀವನ ಪುಟಗಳೇ ಸಾಕ್ಷಿ.

**ಹಾಜಿ ಚಾಂದ ಸಾಬ ಖಾಸೀಮ ಸಾಬ,ಹುಮಾಬಾದ**

ಕಪಡಾ ಬಜಾರ,

ಗುಲಬರ್ಗಾ.

ನಮ್ಮ ಕಮಲಾಪೂರ ಗ್ರಾಮವು ಅನೇಕ ಜಾತಿ ಮತ ಧರ್ಮಗಳಿಂದ ಕೂಡಿದ್ದಾಗಿರುತ್ತದೆ. ಇದರಲ್ಲಿ ಮುಸ್ಲಿಂ ಜನಾಂಗವು ಪ್ರತಿಶತ ಮೂವತ್ತರಷ್ಟಿರುವುದು. ವಿವಿಧ ಧರ್ಮ ಜಾತಿ ಪಂಗಡಗಳಿದ್ದರು ಏಕತೆಯಿಂದ ಕೂಡಿದ ಸುಶಿಕ್ಷಿತ ಗ್ರಾಮವಾಗಿದೆ. ಹೀಗಿರಲು ಕಾರಣ ಶ್ರೀಶಂಕರ ಶೆಟ್ಟಿ ಪಾಟೀಲರ ಪ್ರಭಾವವೆಂದೇ ಹೇಳಬಹುದು. ಮುಸ್ಲೀಂ ಜನಾಂಗದ ಬಗ್ಗೆ ಪಾಟೀಲರ ಔದಾರ್ಯ, ಭಾವೈಕ್ಯ ಅನುಕಂಪ ಅಪ್ರತಿಮ ಕೋಮುಸೌಹಾರ್ದತೆಗೆ ನಿದರ್ಶನವಾಗಿವೆ.

ಶ್ರೀಶಂಕರ ಶೆಟ್ಟಿ ಪಾಟೀಲರು ಅಲ್ಪಸಂಖ್ಯಾತರ ಧರ್ಮ ಆಚರಣೆಯ ಬಗ್ಗೆ ರಕ್ಷಣೆ ಒದಗಿಸಿ ಗೌರವ ನೀಡುತ್ತಿದ್ದಾರೆ. ಮಂದಿರವಾಗಲಿ ಮಸ್ಜಿದ ಆಗಲಿ ಒಂದೇ. ದೇವರ ಧಾಮವಾಗಿದ್ದ ದ್ವೇಷ ಅಸೂಹೆ ಪಡದಂತೆ ಅವರವರ ಧರ್ಮದ ಗೌರವ ಕಾಪಾಡುತ್ತಿದ್ದಾರೆ. ಒಂದು ಕುಟುಂಬದ ಯಜಮಾನನಂತೆ ಈ ಗ್ರಾಮದ ಯಜಮಾನರಾಗಿದ್ದಾರೆ. ಇಡೀ ಗ್ರಾಮದ ಜನರು ಅವರ ಮಾರ್ಗದರ್ಶನದಲ್ಲಿ ಗೌರವಯುತ ಜೀವನ ಸಾಗಿಸುತ್ತಲಿರುವರು. ಗುಡಿ- ಗೋಪುರ ಗೋಪುರಕ್ಕೆ ಕಳಸವಿದ್ದಂತೆ ಶ್ರೀಪಾಟೀಲರು ನಮ್ಮ ಗ್ರಾಮದ ಜೀವನಾಡಿಯಾಗಿದ್ದಾರೆ.

**ಎಂ.ಕೆ. ನಜೀರ್ ಅಹಮ್ಮದ**

ಪ್ರಾಚಾರ್ಯರು

ಸರಕಾರಿ ಪದವಿ ಪೂರ್ವ ಕಾಲೇಜು

ಕಮಲಾಪೂರ,

ಜಿ.ಗುಲಬರ್ಗಾ.

ಶ್ರೀಶಂಕರಶೆಟ್ಟಿ ಪಾಟೀಲರು ನಮ್ಮ ಶಿಕ್ಷಣ ಸಂಸ್ಥೆಯ ಅಭಿವೃದ್ಧಿಗಾಗಿ ಸಲಹೆ ಸೂಚನೆಗಳನ್ನು ನೀಡುತ್ತ ಮಾರ್ಗದರ್ಶಕರಾಗಿ ನಿಸ್ಪೃಹ ಸೇವೆ ಸಲ್ಲಿಸುತ್ತಲಿದ್ದಾರೆ.

ಕಮಲಾಪೂರ ಗ್ರಾಮೀಣ ಪ್ರದೇಶವಾಗಿದ್ದರೂ ಪಟ್ಟಣಕ್ಕೆ ಬೇಕಾಗುವ ಎಲ್ಲ ಸೌಲಭ್ಯಗಳನ್ನು ಪಾಟೀಲರು ದೊರಕಿಸಿಕೊಟ್ಟಿದ್ದಾರೆ. ಉತ್ತಮ ಕೆಲಸಮಾಡುವವರಿಗೆ ಸದಾ ಪ್ರೋತ್ಸಾಹ ಮತ್ತು ಮೆಚ್ಚುಗೆ ವ್ಯಕ್ತಪಡಿಸುವ ಬಹುದೊಡ್ಡಗುಣದ ಪಾಟೀಲರ ಪ್ರಭಾವ ನಮ್ಮ ಮೇಲೂ ಸಾಕಷ್ಟು ಆಗಿದೆ. ಯುವಕರಿಗೂ ಅವರು ಸ್ಫೂರ್ತಿದಾಯಕರಾಗಿದ್ದಾರೆ.

**ಎಸ್.ಎಸ್.ಹಿರೇಮಠ**
ನಿವೃತ್ತ ಅಧ್ಯಾಪಕರು
ಬಸವೇಶ್ವರ ನಗರ, ಗುಲಬರ್ಗಾ

ಕಾಯಯೋಗಿಗಳಾದ ಶ್ರೀಶಂಕರಶೆಟ್ಟಿ ಪಾಟೀಲರು ಸದಾ ತಮ್ಮೂರಿನ ಪ್ರಗತಿಯ ಬಗ್ಗೆ ಮತ್ತು ದೀನ ದುಲಿತರ ಏಳ್ಗೆ ಬಗ್ಗೆ ಚಿಂತನೆ ಮಾಡುತ್ತಿದ್ದಾರೆ. ವಿದ್ಯಾಪ್ರೇಮಿಗಳಾದ ಇವರು ಮೊದಲು ತಮ್ಮ ಊರಿಗೆ ಸರಕಾರಿ ಪ್ರೌಢ ಶಾಲೆ ಮಂಜೂರು ಮಾಡಿಸಿಕೊಂಡರು. ತಮ್ಮ ಊರಿನ ಸುತ್ತ ಮುತ್ತಲಿನ ಹಳ್ಳಿಯ ಜನ ವಿದ್ಯಾವಂತರಾಗಬೇಕು. ಅವರ ಆರ್ಥಿಕ ಸ್ಥಿತಿ ಸುಧಾರಿಸಬೇಕೆಂಬುದು ಅವರ ಹಂಬಲ. ಸರಕಾರದಿಂದ ಜನೋಪಯೋಗಿ ಯೋಜನೆಗಳು ಬಂದರೆ ಅಧಿಕಾರಿಗಳನ್ನು ಭೇಟಿಯಾಗಿ ತಮ್ಮೂರಿನಲ್ಲಿ ಯೋಜನೆಗಳನ್ನು ಅನುಷ್ಠಾನಕ್ಕೆ ತರಬೇಕೆಂದು ವಿನಂತಿಸುತ್ತಿದ್ದರು. ಯೋಜನೆಗಳಿಗೆ ಬೇಕಾದ ಅನುಕೂಲತೆಗಳನ್ನು ತಮ್ಮೂರಿನಿಂದ ಒದಗಿಸುತ್ತಿದ್ದರು. ಈಗಲೂ ಒದಗಿಸುತ್ತಿದ್ದಾರೆ.

ಜಾತೀಯತೆ, ಬಂಧು ಬಳಗದ ಹಿತ ಹಾಗೂ ಆಶೆ ಆಯಿಷಗಳ ಮಾಯಾಜಾಲದಿಂದ ದೂರವಿದ್ದು ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸುತ್ತಾ ಬಂದಿದ್ದಾರೆ. ನ್ಯಾಯ ಪಕ್ಷಪಾತಿಗಳಾದ ಅವರು ಯಾವಪಂಥಕ್ಕೂ ಅಂಟಿಕೊಳ್ಳದೇ ಮಾನವೀಯತೆಯ ಮಾರ್ಗದಲ್ಲಿ ನಡೆದು ಬಂದವರು. ಲಂಚ ಎಂಬುದನ್ನು ನರಕ ಎಂದು ಭಾವಿಸಿದ್ದಾರೆ. ಕೆಲಸದಲ್ಲಿ ಕೀಳರಿಮೆಯಿಲ್ಲ. ಅವರು ಎಲ್ಲ ಕೆಲಸಗಳಿಗೂ ಅಷ್ಟೇ ಗಮನ ಹರಿಸುತ್ತಿದ್ದಾರೆ.

**ಎಸ್.ಎಸ್.ಹಿರೇಮಠ**
ಪ್ರಾಂಶುಪಾಲರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಕಮಲಾಪೂರ
ಜಿ.ಗುಲಬರ್ಗಾ.

ಶ್ರೀಶಂಕರಶೆಟ್ಟಿ ಪಾಟೀಲರು ಹಿರಿಯ ಗಾಂಧೀವಾದಿಗಳು, ಸ್ವಾತಂತ್ರ್ಯ ಸೇನಾನಿ. ಅಣ್ಣ ಬಸವಣ್ಣನವರ ವಾಣಿಯಂತೆ ಕಾಯಕದಲ್ಲೇ ಪರಮ ಸುಖವನ್ನು ಕಂಡುಕೊಳ್ಳುವ ಸ್ವಭಾವದವರು. ಅವರ ಕ್ರಿಯಾಶೀಲತೆ, ಮುತ್ಸದ್ದಿತನವನ್ನು ಸಾಮಾಜಿಕ ಶೈಕ್ಷಣಿಕ ಸಮಸ್ಯೆಗಳನ್ನು ಹೋಗಲಾಡಿಸಲು ಯೋಧನಂತೆ ಕಾರ್ಯಪ್ರವೃತ್ತರಾಗುವ ರೀತಿ ಎಲ್ಲರೂ ಗಮನಿಸುವಂಥಾದ್ದು.

ಇಳಿ ವಯಸ್ಸಿನಲ್ಲೂ ಹದಿಹರೆಯದ ಹುಮ್ಮಸ್ಸುಳ್ಳ ಪಾಟೀಲರಿಗೆ ಆ ಭಗವಂತ ಇನ್ನೂ ಹೆಚ್ಚುಕಾಲ ಊರಿಗೆ, ನಾಡಿಗೆ, ರಾಜ್ಯಕ್ಕೆ, ರಾಷ್ಟ್ರಕ್ಕೆ ಅನುಪಮ ಸೇವೆ ಸಲ್ಲಿಸುವ ಅವಕಾಶ ಒದಗಿಸಿಕೊಡಲಿ.

**ಸುಭಾಷ್ಚಂದ್ರ ಶೆಟ್ಟಿ**
ಬಾಚನಾಳ
ಬ್ಯಾಂಕ ಕಾಲನಿ ನೆಹರೂ ಗಂಜ
ಗುಲಬರ್ಗಾ-೪.

ಚಿಕ್ಕಂದಿನಿಂದಲೂ ಶ್ರೀಶಂಕರ ಶೆಟ್ಟಿ ಪಾಟೀಲರದು ಹೋರಾಟ ಸ್ವಭಾವ. ಸಮಾಜದಲ್ಲಿ ಎಂದೂ ಅನ್ಯಾಯ ಅತ್ಯಾಚಾರಕ್ಕೆ ಆಸ್ಪದ ಕೊಡದವರು. ಯಾರಿಗಾದರೂ ಅನ್ಯಾಯವಾಗುತ್ತಿರುವುದನ್ನು ಕಂಡರೆ ಸ್ವತಃ ತಾವು ಭಾಗವಹಿಸಿ, ನ್ಯಾಯ ಒದಗಿಸಿಕೊಡುವ ವಿಚಾರವಂತ ಧೀರರು. ಒಂದುವೇಳೆ ಸಮಾಜದಲ್ಲಿ ನ್ಯಾಯ ದೊರೆಯದಿದ್ದರೆ, ಎದುರಾಳಿ ಸರಳವಾಗಿ ಒಪ್ಪದಿದ್ದರೆ, ಕೋರ್ಟಿಗೆ ಹೋಗಿಯಾದರೂ ನ್ಯಾಯ ಪಡೆಯುವ ಛಲ ಇವರದು. ಇವರ ಛಲಕ್ಕೆ ಇವರಲ್ಲಿದ್ದ ಕಾಯ್ದೆ ಜ್ಞಾನ ಬಲವು ಪೂರಕವಾಗಿದೆ. ನ್ಯಾಯ ನೀತಿ ಧರ್ಮಕ್ಕಾಗಿ ಇಂಥ ಇಳಿ ವಯಸ್ಸಿನಲ್ಲಿಯೂ ಗೌಡರ ಹೋರಾಟ ನಡೆಯುತ್ತದೆ.

ಮುಸಲ್ಮಾನರು ಅಂದು ರಾಜಾಶ್ರಯ ದರ್ಪದಿಂದ ಜನರ ಮೇಲೆ ಅನ್ಯಾಯ ಅತ್ಯಾಚಾರ ಮಾಡುತ್ತಿದ್ದಾಗ ಹಿಂದೂಗಳ ಪರವಾಗಿ ಹೋರಾಡಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿ ಗುಂಡೇಟಿಗೂ ಆಹುತಿಯಾಗಿ ಅನ್ಯಾಯದ ವಿರುದ್ಧ ಹೋರಾಡಿ ಬದುಕಿದ ಈ ಧೀರ ಹೈದ್ರಾಬಾದ ರಾಜ್ಯ ಸ್ವತಂತ್ರವಾದ ಮೇಲೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲು ಹಿಂದೂಗಳು ಮುಸ್ಲಿಂರ ಮೇಲೆ ಮಾಡುತ್ತಲಿರುವ ಅತ್ಯಾಚಾರ ಅನ್ಯಾಯ ಸಹಿಸಿಕೊಳ್ಳಲು ಆಗಲಿಲ್ಲ. ಮುಸ್ಲಿಂರನ್ನು ಕಾಪಾಡಲು ಮುಂದೆ ಬಂದರು ಅವರಿಗೆ ರಕ್ಷಣೆ ನೀಡಿದರು.

**ಪಿಡೊ ಮೈರಾಡ ಸಂಸ್ಥೆ**

ಕಮಲಾಪೂರ, ಗುಲಬರ್ಗಾ

ವಿಶಾಲ ಕರ್ನಾಟಕದ ಉತ್ತರ ತುದಿಯಲ್ಲಿರುವ ಗುಲಬರ್ಗಾ ಜಿಲ್ಲೆಯಲ್ಲಿ ಅತ್ಯಂತ ಚಟುವಟಿಕೆಯ ಗ್ರಾಮವಾಗಲು ಮೂಲಕಾರಣ ತೊಂಬತ್ತುವರುಷಗಳ ಹಿಂದೆ ಜನ್ಮತಾಳಿದ ಶ್ರೀಶಂಕರಶೆಟ್ಟಿ ಪಾಟೀಲರೆಂದರೆ ಅತಿಶಯೋಕ್ತಿಯಲ್ಲ. ಜನಸೇವೆಯೆ ಜನಾರ್ಧನ ಸೇವೆಯೆಂದು ಭಾವಿಸಿದ ಶ್ರೀಶಂಕರಶೆಟ್ಟರು ಕಮಲಾಪೂರ ಗ್ರಾಮವನ್ನು ರಾಜ್ಯದ ನಕಾಶೆಯಲ್ಲಿ ಮಿನುಗುವಂತೆ ಮಾಡಿ ತೋರಿಸಿದ್ದಾರೆ. ಶ್ರೀಶಂಕರ ಶೆಟ್ಟರು ಉತ್ತಮ ಚಿಂತನ ಶೀಲರೂ ಆಗಿದ್ದು ಕಮಲಾಪೂರವು ವಿದ್ಯಾಕ್ಷೇತ್ರದಲ್ಲಿ ಪ್ರಜ್ವಲಿಸುವಂತೆ ಮಾಡಿದ್ದಾರೆ. ಸಮ ವಯಸ್ಕರಿಗೆ ಉತ್ತಮ ಸ್ನೇಹಿತರೂ ಕಿರಿಯರಿಗೆ ಸೂಕ್ತಮಾರ್ಗದರ್ಶಿಗಳೂ ಆಗಿದ್ದಾರೆ.

ಶ್ರೀಶಂಕರಶೆಟ್ಟಿ ಪಾಟೀಲರು ಮೈರಾಡ ಸಂಸ್ಥೆಯ ಹಿತ್ಯೃಷಿಗಳೂ, ಸಮುದಾಯ ಅಭಿವೃದ್ಧಿಯ ಪ್ರೇರೇಪಕರೂ ಆಗಿರುವರು. ಮೈರಾಡ ಸಂಸ್ಥೆಯ ಸುತ್ತಲಿನ ಗ್ರಾಮಗಳಲ್ಲಿ ಬೆರೆತು ಎಲ್ಲರೂ ಅಭಿಮಾನ ಪಡುವಂತೆ ನಿರಂತರ ಪ್ರೋತ್ಸಾಹಿಸುತ್ತಲಿರುವರು.

ಕಮಲಾಪೂರದ ಶಂಕರಶೆಟ್ಟಿ ಪಾಟೀಲರು ಮಾಜಿ ಸಂಸದರಾಗಿದ್ದರೂ ರಾಜಕೀಯ ಕ್ಷೇತ್ರದಿಂದ ಸಂಪೂರ್ಣ ದೂರ ಉಳಿದವರು. ಆದರೆ ಸಮಾಜ ಸೇವೆಯಲ್ಲಿ ತೊಂಬತ್ತರ ಈ ಇಳಿವಯಸ್ಸಿನಲ್ಲಿಯೂ ತಮ್ಮನ್ನು ತೊಡಗಿಸಿಕೊಂಡವರಾಗಿದ್ದಾರೆ. ಇಂಥವರ ಚರಿತ್ರೆ ಇತರರಿಗೆ ಅದರಲ್ಲಿಯೂ ಯುವಕರಿಗೆ ಹೆಚ್ಚು ಆದರ್ಶಪ್ರಾಯವೂ ಅನುಕರಣೀಯವೂ ಆದುದಾಗಿದೆ. ಅಂತೆಯೆ ಅವರ ಚರಿತ್ರೆಯನ್ನು ಶ್ರೀಸಾಮಾನ್ಯರೂ ಯುವಕರೂ ಓದಿ ತಿಳಿಯುವಂತಾಗಲು ಸಂಕ್ಷಿಪ್ತವಾಗಿ ಬರೆಯಲಾಗಿದೆ.

ಶಂಕರಶೆಟ್ಟಿ ಪಾಟೀಲರು ಕರ್ನಾಟಕದ ಕಲಬುರ್ಗಿ ಜಿಲ್ಲೆ ಹಾಗೂ ತಾಲೂಕಿನ ಕಮಲಾಪೂರ ಗ್ರಾಮದವರು. ಇಲ್ಲಿಯ ವಿದ್ಯಾಪ್ರೇಮಿಗಳೂ ಸುಸಂಸ್ಕೃತರೂ ಉದಾರಮಣಿಗಳೂ ಆದ ರಾಚಪ್ಪಗೌಡ ಮತ್ತು ಸಾಧ್ವಿಮಣಿ ಬಸಮ್ಮತಾಯಿ ದಂಪತಿಗಳಿಗೆ ಸತ್ಪುತ್ರರಾಗಿ ದಿ ೧೮-೪-೧೯೧೬ರಂದು ಜನ್ಮತಾಳಿದವರಾಗಿದ್ದಾರೆ.

ಶಂಕರಶೆಟ್ಟಿ ಪಾಟೀಲರು ತಂದೆ ತಾಯಿಗಳ ಪಾಲನೆಪೋಷಣೆಯಲ್ಲಿ ಬೆಳೆದು ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಮಲಾಪೂರದಲ್ಲಿ, ಮಾಧ್ಯಮಿಕ ವಿದ್ಯಾಭ್ಯಾಸವನ್ನು ಕಲಬುರ್ಗಿ, ಬೀದರ, ರಾಯಚೂರುಗಳಲ್ಲಿ ಪೂರೈಸಿದವರಾಗಿದ್ದಾರೆ. ತಂದೆಯವರ ಅಭಿಲಾಷೆಯಂತೆ ಮೋಡಿ, ಮರಾಠಿ ಭಾಷೆಗಳನ್ನು ಖಾಸಗಿ ಶಾಲೆಯಲ್ಲಿ ಪಡೆದು ಐಚ್ಛಿಕ ಭಾಷೆಯನ್ನಾಗಿ ಫಾರಿಸಿಯನ್ನೂ ಕಲಿತಿರುವರು. ತಂದೆಯುವರ ಕಣ್ಣರಿಕೆಯುಲ್ಲಿ ಲೆಕ್ಕ ಪತ್ರ ವ್ಯವಹಾರವನ್ನೂ ಅರಿತುಕೊಂಡವರಾಗಿದ್ದಾರೆ. ನವಾಬರ ಪ್ರಭುತ್ವಕ್ಕೊಳಪಟ್ಟದ್ದರಿಂದ ಅಂದು ಉರ್ದು ಮಾಧ್ಯಮದಲ್ಲಿ ತಮ್ಮ ಶಿಕ್ಷಣ ಪಡೆದುಕೊಂಡವರಾಗಿದ್ದಾರೆ. ತಂದೆ-ತಾಯಿಗಳ ಅಭಿಲಾಷೆಯಂತೆ ಮನೆಯ ಗುರುಗಳಿಂದ ಕನ್ನಡ ಭಾಷೆಯನ್ನು ಕಲಿತಿರುವರು. ಜೊತೆಗೆ ಹಿಂದಿ ಇಂಗ್ಲಿಷ ಭಾಷೆಗಳನ್ನೂ ಕಲಿತವರಾಗಿದ್ದಾರೆ. ಅಂತೆಯೆ ಅಂದು ಶ್ರೀಶಂಕರಶೆಟ್ಟಿ ಪಾಟೀಲರನ್ನು ಬಹುಭಾಷಾ ಪಂಡಿತರೆಂದೂ ಹರಫನ್ ಮೌಲಾ ಎಂದು ಕರೆದು ಗೌರವಿಸಿದ್ದರು. ಶಾಲೆಯಲ್ಲಿ ವಿದ್ಯಾರ್ಥಿಯಾಗಿ ಓದುವಾಗ ಪಠ್ಯ ವಿಷಯಗಳ ಜೊತೆಗೆ ಪಠ್ಯೇತರ ಚಟುವಟಿಕೆಗಳಲ್ಲಿಯೂ ಅಷ್ಟೇ ಆಸಕ್ತಿಯಿಂದ ಭಾಗಿಗಳಾಗುತ್ತಿದ್ದರು. ಶಾಲೆಯಲ್ಲಿ ಆದರ್ಶ ವಿದ್ಯಾರ್ಥಿಯಾಗಿ ಇವರನ್ನು ಪರಿಗಣಿಸಿದ್ದರು.

ಶಂಕರಶೆಟ್ಟಿ ಪಾಟೀಲರು ತಂದೆ ರಾಚಪ್ಪ ಗೌಡರಿಂದ ಚಿಕ್ಕಂದಿನಲ್ಲಿಯೆ ಕಾಯ್ದೆ ಕಾನೂನಿನ ಜ್ಞಾನ ಪಡೆದವರಾಗಿದ್ದರು. ಪೋಲಿಸಗೌಡಕಿಯ ಖಾತೆ, ಕೀರ್ದಿ, ರಜಿಸ್ಟರ್ ಪುಸ್ತಕದ ವ್ಯವಹಾರವನ್ನು ತಂದೆಯವರಿಂದ ತಿಳಿದುಕೊಂಡವರಾಗಿದ್ದರು. ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿ ಮುಂದಿನ ವರ್ಗದಲ್ಲಿ ಓದುತ್ತಿದ್ದಾಗ ಅಕಸ್ಮಾತ್ ತಂದೆ ರಾಚಪ್ಪಗೌಡರು ನಿಧನರಾದುದರಿಂದ

ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಬೇಕಾಗಿಬಂದಿತು. ಇವರೇ ಜೇಷ್ಠ ಪುತ್ರರಾದುದರಿಂದ ಮನೆತನದ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕಾಯಿತು. ತಂದೆಯವರಿಗೆ ತಕ್ಕ ಮಗನಾಗಿ ತಮ್ಮ ಚಿಕ್ಕವಯಸ್ಸಿನಲ್ಲಿಯೆ ಅಂದರೆ ಕ್ರಿ.ಶ.೧೯೩೪ನೇ ಇಸ್ವಿಯಲ್ಲಿ ಕಮಲಾಪೂರ ಪೋಲಿಸಗೌಡಕಿ ಕೆಲಸವನ್ನು ಸ್ವೀಕರಿಸಿದರು. ಅದರಲ್ಲಿ ಯಶಸ್ವಿಯೂ ಆದರು.

ಶಂಕರಶೆಟ್ಟಿ ಪಾಟೀಲರು ಹುಟ್ಟಿದ್ದು ದೊಡ್ಡ ಮನೆತನದಲ್ಲಿ. ಧನ-ಕನಕ, ವಸ್ತು ವಡವೆ, ಧವಸ ಧಾನ್ಯ, ದನ, ಕರು, ಹೊಲ ಮನೆ, ಮಕ್ಕಳು ಮೊಮ್ಮಕ್ಕಳಿಂದ ಇವರದು ಬಹುದೊಡ್ಡದಾದ ಬಳಗ, ತುಂಬಿದ ಶ್ರೀಮಂತಿಕೆಯ ಮನೆ. ಅದೂ ಹೃದಯ ಶ್ರೀಮಂತಿಕೆಯ ಘನಮನ ಸಂಪನ್ನರ ಮನೆ ಗೌಡರದು. ಸರ್ವರನ್ನು ಸಮಾನದೃಷ್ಟಿಯಿಂದ ಕಾಣುವ ಭಾವೈಕ್ಯ ಮನೋಭಾವ, ವೈರಿಗಳನ್ನೂ ಮನೆಯ ಮಗನೆಂದು ಕಾಣುವ ಮಹಾಶರಣರ ಮನೋಬಲ, ಬಡವರಿಗೆ ದೀನ ದಲಿತರಿಗೆ ನಿರ್ಗತಿಕರಿಗೆ ಕೈಮುಚ್ಚಿ ದಾನ ಮಾಡುವ ಸಹಾಯ ನೀಡುವ ಮಹಾದಾಸೋಹಿಗಳಿವರು.

ಮೈಸೂರ ಪ್ರದೇಶ ಕಾಂಗ್ರೆಸ್ ಸಮಿತಿಯು ಕ್ರಿ.ಶ.೧೯೫೭ನೇ ಸಾಲಿನಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಲು ಶ್ರೀಶಂಕರಶೆಟ್ಟಿ ಪಾಟೀಲರಿಗೆ ಶಾಸನ ಸಭೆಯ ಟಿಕೆಟ್ಟು ನೀಡಿತ್ತು. ಕಲಬುರ್ಗಿ ಜಿಲ್ಲೆಯ ಕಾಳಗಿ ಮತಕ್ಷೇತ್ರ ಇವರದಾಗಿತ್ತು. ಈ ಮತಕ್ಷೇತ್ರದ ಹಿರಿಯರು ಅತ್ಯಂತ ಉತ್ಸಾಹದಿಂದ ಶಂಕರಶೆಟ್ಟಿ ಪಾಟೀಲರನ್ನು ಪ್ರಚಂಡ ಬಹುಮತದಿಂದ ಆರಿಸಿ ತರಲು ಪಣತೊಟ್ಟು, ಕುದುರೆಯ ಮೇಲೆ ಹಳ್ಳಿ ಹಳ್ಳಿ ಅಡ್ಯಾಡಿ ಗೌಡರನ್ನು ಆರಿಸಿ ತರುವಂತೆ ಮಾಡಿದ ಜನತೆಯ ಉಪಕಾರವನ್ನು ಗೌಡರು ಮರೆಯಲಿಲ್ಲ. ಹಳ್ಳಿಹಳ್ಳಿ ಸಂಚರಿಸಿ ಮುಖಂಡರನ್ನು ಕಂಡು ಬೇಕು ಬೇಡಗಳನ್ನು ಕೇಳಿಕೊಂಡು ಅತ್ಯಂತ ನಿಷ್ಠೆಯಿಂದ ತಮ್ಮ ಮತಕ್ಷೇತ್ರದ ಅಭಿವೃದ್ಧಿಗಾಗಿ ಶ್ರಮಿಸಿರುವುದು ಇತಿಹಾಸವಾಗಿದೆ. ಹಲವಾರು ಸಹಕಾರಿ ಸಂಘ-ಸಂಸ್ಥೆಗಳು, ಶಾಲಾ ಕಾಲೇಜುಗಳು, ಬ್ಯಾಂಕು ದವಾಖಾನೆ, ನೀರಾವರಿ ಸೌಲಭ್ಯ, ನವಕರಿ ಹೀಗೆ ಒಂದಿಲ್ಲೊಂದು ಬಗೆಯ ಜನಹಿತ ಕಾರ್ಯಗಳನ್ನು ಗೌಡರು ಮಾಡಿ ತೋರಿಸಿರುವರು.

ಶಂಕರಶೆಟ್ಟಿ ಪಾಟೀಲರು ಗುರು-ಲಿಂಗ-ಜಂಗಮ ಸೇವಾ ತತ್ಪರರು. ಬಸವಾದಿ ಶಿವಶರಣರ ಉದಾತ್ತ ಸಂಸ್ಕೃತಿಯ ಪಡಿಯಚ್ಚಿನಲ್ಲಿ, ಕಾಯಕ-ದಾಸೋಹ ತತ್ವಗಳನ್ನು ಜನತೆಗೆ ತಿಳಿಯಪಡಿಸುತ್ತ ಅವರನ್ನು ಧರ್ಮಾಭಿಮಾನಿಗಳನ್ನಾಗಿ ಪರಿವರ್ತಿಸಿರುವರು. ಮೋಸ, ಕಳವು, ಅಸತ್ಯ, ಹಿಂಸೆಗೆ ಎಳ್ಳಷ್ಟು ಆಸ್ಪದ ಕೊಂಡದೇ ಬಹುನಿಷ್ಠೆಯಿಂದ ಪೋಲಿಸಗೌಡಕಿಯನ್ನು ಯಾರ ಮನಸ್ಸು ನೋಯಿಸದೆ ಮಾಡಿರುವುದು ಗೌಡರ ಬುದ್ಧಿವಂತಿಕೆಗೆ ನಿದರ್ಶನವಾಗಿರುವದು. ಗೌಡರು ಅಷ್ಟೇ ನ್ಯಾಯನಿಷ್ಠುರರು. ದಾಕ್ಷಿಣ್ಯ ಪರರಲ್ಲ. ಸೌಮ್ಯಸ್ವಭಾವದ ಸತತ ಕಾರ್ಯಚಟುವಟಿಕೆಗಳಲ್ಲಿ

ಮುಗ್ನರಾಗಿರುವ ಗೌಡರು ಪ್ರಾಮಾಣಿಕರು. ದಯಾಮುಖಿಗಳು, ಪೂಜೆ-ಪ್ರಾರ್ಥನೆಗಳಿಂದ ಆತ್ಮಬಲ ಹೆಚ್ಚಿಸಿಕೊಂಡವರು. ಸದುವಿನಯವೆ ಸದಾಶಿವನ ಒಲುಮೆಯೆಂದೆಂದು ಮಾನವೀಯ ಮೌಲ್ಯಗಳನ್ನು ತಮ್ಮ ಬದುಕಿನುದ್ದಕ್ಕೂ ಅಳವಡಿಸಿಕೊಂಡು ಬಂದ ಮಹಾಶರಣರೆನಿಸಿರುವರು.

ಶಂಕರಶೆಟ್ಟಿ ಪಾಟೀಲರು ನಾಡು-ನುಡಿಯ ಬಗೆಗೆ ಅಭಿಮಾನವಿಟ್ಟುಕೊಂಡವರು. ನನ್ನ ದೇಶ, ನನ್ನ ಜನ ಎಂದೆಂದು ರಾಷ್ಟ್ರಾಭಿಮಾನ ಮೆರೆದ ಗೌಡರು ಮಹಾತ್ಮಾ ಗಾಂಧೀಜಿಯವರ ಅನುಯಾಯಿಗಳು. ಶುದ್ಧ ಖಾದಿ ಧಾರಿಗಳು, ವೈರಿಗಳನ್ನು ಪ್ರೀತಿಸುವ ಉದಾತ್ತಗುಣದ ಗೌಡರು ನುಡಿ-ನಡೆಯ ಸಮರಸ ಜೀವನ ನಡೆಸುವಂಥವರಾಗಿದ್ದಾರೆ. ಸ್ವಾರ್ಥಕ್ಕಂಟಿಕೊಂಡವರಲ್ಲ.. ಕೀರ್ತಿಶನಿಯ ಬೆನ್ನುಹತ್ತಿದವರಲ್ಲ, ಪರರನೋವು ತಮ್ಮ ನೋವು ಎಂದು ಇತರರ ದುಃಖದಲ್ಲಿ ಸಮಭಾಗಿಗಳಾಗಿರುವ ಗೌಡರದು ವಿಶ್ವವಿಶಾಲ ದೃಷ್ಟಿ.

ಶಂಕರಶೆಟ್ಟಿ ಪಾಟೀಲರದು ಸಂತೃಪ್ತ ಜೀವನ. ಇವರ ಧರ್ಮಪತ್ನಿ ಶ್ರೀಮತಿ-ರಂಗಮ್ಮ ಅವರ ಪಾತ್ರವಂತೂ ಬಹುದೊಡ್ಡದು. ಗೌಡರ ಹಿಂದಿರುವ ಶಕ್ತಿಯೇ ಅವರು. ರಂಗಮ್ಮ ತಾಯಿಯವರು ಗೃಹಿಣಿಯಾಗಿ, ಗೃಹಲಕ್ಷ್ಮಿಯಾಗಿ ಇವರ ಸೇವೆ ಮಾಡುತ್ತ ದೊಡ್ಡಮನೆತನದ ಜವಾಬ್ದಾರಿಯನ್ನು ಅಷ್ಟೇ ಶ್ರದ್ಧೆಯಿಂದ ವಹಿಸಿಕೊಂಡರು. ಅದರಿಂದಾಗಿಯೆ ಗೌಡರಿಗೆ ಸಮಾಜಸೇವೆ, ಜನಸೇವೆ ಕೈಕೊಳ್ಳಲು ಅನುಕೂಲವಾಯಿತು. ಆದರ್ಶ ದಂಪತಿಗಳಾದ ಇವರ ಜೀವನ ಇತರರಿಗೂ ಆದರ್ಶ, ಅನುಕರಣೀಯ. ಸ್ತ್ರೀಯರನ್ನು ಸಾಕ್ಷಾತ್ ದೇವತೆಯೆಂದು ಕಾಣುವ ಶರಣ ಜೀವನ ಗೌಡರದು. ಅಂತೆಯೆ ರಂಗಮ್ಮನವರನ್ನು ಗೌಡರು ರೀ ಹಚ್ಚಿ ಬಹುವಚನದಲ್ಲಿ ಗೌರವಕೊಟ್ಟು ಮಾತನಾಡಿಸುತ್ತಿದ್ದರು. ಸಕಲ ಜೀವರಾಶಿಗಳಿಗೂ ಲೇಸನೆ ಬಯಸುತ್ತ, ಬೈದವರೆನ್ನ ಬಂಧುಗಳೆನ್ನುತ್ತ, ಸಮಾಜದ, ಗ್ರಾಮದ, ರಾಜ್ಯದ, ರಾಷ್ಟ್ರದ ಒಕ್ಕೂಟದ ಅಭಿವೃದ್ಧಿಗಾಗಿ ಹಗಲಿರುಳೂ ಸೇವೆ ಸಲ್ಲಿಸುತ್ತಿದ್ದರು. ಸತಿ ಪತಿಗಳೊಂದಾದ ಇವರ ಸೇವೆಗೆ ಶಿವಕರುಣಿಸಿದನೆನ್ನುವಂತೆ ಏಳು ಮಕ್ಕಳ ತಾಯಿತಂದೆಗಳಾಗಿ ಶೋಭಿಸಿದರು.

ಶಂಕರಶೆಟ್ಟಿ ಪಾಟೀಲರು ತೊಂಬತ್ತರ ಇಳಿವಯಸ್ಸಿನಲ್ಲಿಯೂ ಸದೃಢಕಾಯರಾಗಿ, ಸಚ್ಚಾರಿತ್ರ ಶೀಲರಾಗಿ ಬದುಕುತ್ತ, ಸಮಾಜಸೇವೆ ಸಲ್ಲಿಸುತ್ತಿರುವುದು, ಸಭೆ ಸಮ್ಮೇಳನಗಳಿಗೆ ಹಾಜರಾಗುತ್ತಿರುವುದು ನಮ್ಮೆಲ್ಲರ ಭಾಗ್ಯ. ಶ್ರೀಶಂಕರಶೆಟ್ಟಿ ಪಾಟೀಲರಿಗೆ ಇನ್ನೂ ಹೆಚ್ಚಿನ ಆಯುರಾರೋಗ್ಯಭಾಗ್ಯ ಶಿವ ಕರುಣಿಸಲೆಂದು ಹಾರೈಸುವೆ.

ಶಂಕರಶೆಟ್ಟಿ ಪಾಟೀಲರು ಹಳ್ಳಿಯಲ್ಲಿಯೆ ಹುಟ್ಟಿ ಹಳ್ಳಿಯಲ್ಲಿಯೆ ಬಾಳಿ–ಬೆಳಗಿದವರು. ಇತರ ರಾಜಕಾರಣಿಗಳಂತೆ ಸಂಸದರಾದ ಮೇಲೆ ಬೆಂಗಳೂರು ರಾಜಧಾನಿಯಲ್ಲಿ

ವಾಸಮಾಡಿಕೊಂಡಿರದೆ, ಹುಟ್ಟಿದ ಹಳ್ಳಿಯಲ್ಲಿಯೆ ತಮ್ಮ ವೃದ್ಧಾಪ್ಯಜೀವನ ಕಳೆಯುತ್ತಿರುವುದು ವಿಶೇಷವಾಗಿದೆ.

ದೇಶ ಸುಧಾರಿಸಬೇಕಾದರೆ ಮೊದಲು ಹಳ್ಳಿಗಳು ಸುಧಾರಿಸಬೇಕು, ದೇಶದ ಸಂಪತ್ತೆಂದರೆ ಬರಿಯ ಉದ್ಯಮಿ ನಗರಗಳಲ್ಲ, ಸಂಸ್ಕೃತಿಯ ತವನಿಧಿಯೆನಿಸಿರುವ ಹಳ್ಳಿಗಳು, ಅಲ್ಲಿಯ ಮಾನವೀಯತೆ, ಸಹಕಾರ ಮನೋಭಾವ, ವಿವಿಧ ಕುಲಕಸಬುಗಳಲ್ಲಿರುವ ಶ್ರದ್ಧೆ ಹಾಗೂ ಗಡಿ ಕೈಗಾರಿಕೆಗಳೆಂಬುದನ್ನು ಮರೆಯಲಾಗದು. ಹಳ್ಳಿಗಳಲ್ಲಿ ಪ್ರಮುಖವಾಗಿರುವ ಉದ್ಯೋಗ ಒಕ್ಕಲುತನ. ದೇಶದ ಜನತೆಗೆ ಅನ್ನದಾತನಾಗಿರುವ ರೈತನು ಸುಖದಿಂದ ಇದ್ದರೆ ಮಾತ್ರ ದೇಶದಲ್ಲಿ ಸುಖ–ಶಾಂತಿ ಸಮೃದ್ಧಿ. ಅಂತೆಯೆ ಕಮಲಾಪೂರದ ಈ ರೈತ ಶ್ರೀಶಂಕರ ಶೆಟ್ಟಿ ಪಾಟೀಲರು ಗ್ರಾಮೀಣ ಜನತೆಯು ಅದರಲ್ಲೂ ರೈತಾಪಿ ವರ್ಗದ ಶ್ರೀಸಾಮಾನ್ಯರ ಪ್ರತಿನಿಧಿಯಾಗಿ ರಾಜ್ಯದ ಸಂಸದ ಪಟುವಾಗಿ ಆಯ್ಕೆಗೊಂಡದ್ದು ಕಲಬುರ್ಗಿ ಜಿಲ್ಲೆಯ ಕಾಳಗಿ ಮತಕ್ಷೇತ್ರದ ಪುಣ್ಯ ವಿಶೇಷ.

ನಮ್ಮ ರಾಜ್ಯ ಮತ್ತು ಕೇಂದ್ರ ಸರಕಾರಗಳು ಕೃಷಿಗೆ ಆದ್ಯತೆ ಕೊಟ್ಟಷ್ಟು ರಾಷ್ಟ್ರಕ್ಕೆ ಹಿತ. ಅಂತೆಯೆ ಗ್ರಾಮಾಭಿವೃದ್ಧಿಯಿಂದಲೇ ಜನತಗೆ ದೇಶಕ್ಕೆ ಕ್ಷೇಮಾಭ್ಯುದಯ ಎಂದೆಲ್ಲ ಘೋಷಿಸುತ್ತಿರುವರು. ಸ್ಥಿರವಾದ ಮತ್ತು ಸಂಪದ್ಭರಿತ ಸಮಾಜಕ್ಕೆ ರಾಷ್ಟ್ರಕ್ಕೆ ಆಧಾರವಾದದ್ದು ಈ ಗ್ರಾಮೀಣ ಬದುಕು. ಗ್ರಾಮೀಣ ಜನತೆಯು ಮೂಲ ಆಶಯುಗಳಲ್ಲಿ ಪ್ರಮುಖವಾದವುಗಳೆಂದರೆ ಕೃಷಿ, ನೀರು, ವಿದ್ಯುತ್, ಆರೋಗ್ಯ, ಶಿಕ್ಷಣ, ಸಹಕಾರ ಮೊದಲಾದ ಕ್ಷೇತ್ರಗಳಾಗಿವೆ. ಇವುಗಳಲ್ಲಿ ಪ್ರಗತಿ ಸಾಧಿಸಿ, ಹಿತ ಮಿತವಾಗಿ ಬಳಸಿಕೊಂಡು ದವಸ–ಧಾನ್ಯ ಬೆಳೆದಲ್ಲಿ ದೇಶ ಸಮೃದ್ಧಿ. ಆಗ ರಾಷ್ಟ್ರದ ಆರ್ಥಿಕ ಸಂಪತ್ತು ಹೆಚ್ಚುತ್ತದೆ. ಜನತೆ, ದುಡಿಯುವ ವರ್ಗ, ನೆಮ್ಮದಿಯಿಂದ ಬಾಳುತ್ತಾರೆ.

ಶಂಕರಶೆಟ್ಟಿ ಪಾಟೀಲರು ಕಮಲಾಪೂರದಲ್ಲಿ ಇದ್ದುಕೊಂಡು ಆ ಹಳ್ಳಿಯನ್ನೇ ನಗರ ಮಾದರಿಯಲ್ಲಿ ಬೆಳೆಸತೊಡಗಿದರು. ಜೊತೆಗೆ ಜನತೆಯಲ್ಲಿ ದೇಶಭಕ್ತಿ ಬಿತ್ತತೊಡಗಿದರು. ಗುರುಭಕ್ತಿ ಮಾತೃ ಭಕ್ತಿ, ಪಿತೃಭಕ್ತಿ ನಾಡಪ್ರೇಮಗಳು ಕಣ್ಮರೆಯಾಗುತ್ತಿರುವುದನ್ನು ಕಂಡುಕೊಂಡ ಪಾಟೀಲರು ಗ್ರಾಮೀಣ ಜನತೆಗೆ ಅವುಗಳ ಅರಿವು ಮೂಡಿಸತೊಡಗಿದರು. ಪಂಡಿತರಿಂದ ಜಾಗತಿಕ ಮಹಾಪುರುಷರ ಚರಿತ್ರೆ ಮತ್ತು ಅವರ ತತ್ವಸಿದ್ಧಾಂತಗಳ ತಿಳುವಳಿಕೆ ಮಾಡಿಸಿಕೊಟ್ಟರು. ಇದರಿಂದ ಜನರಲ್ಲಿ ದೇಶಾಭಿಮಾನವು ಉಕ್ಕಿ ಹರಿಯತೊಡಗಿತು. ಪಾಟೀಲರು ಚಿಕ್ಕಂದಿನಿಂದಲೇ ಖಾದಿ ಧರಿಸುವದನ್ನು ಗಮನಿಸಿದ ಗ್ರಾಮದ ಜನತೆ ತಾವೂ ಖಾದಿ ಧರಿಸ ತೊಡಗಿದರು. ಭಾರತೀಯ ತತ್ವ ಸಿದ್ಧಾಂತಗಳನ್ನು ಸ್ವತಃ ಪಾಟೀಲರು ಅರಿತುಕೊಂಡರು.

ಜೊತೆಗೆ ವೀರಶೈವ ಧರ್ಮದ ಅಷ್ಟಾವರಣ ಪಂಚಾಚಾರ ಹಾಗೂ ಷಟ್‌ಸ್ಥಲ ತತ್ವಗಳ ತಿಳುವಳಿಕೆಯುನ್ನು ಮಾಡಿಕೊಂಡರು. ಕಾಯಕ ದಾಸೋಹ ಅವರ ಜೀವನದ ಹಾಸುಹೊಕ್ಕಾಗಿದೆ.

ಇಂದಿನ ಜನತೆಗೆ ಧಾರ್ಮಿಕ ಮನೋಬಲವಿಲ್ಲದರಿಂದಾಗಿ ಅವರ ಬದುಕಿನಲ್ಲಿ ಬಿರುಕುಗಳು ಬಿಡುತ್ತಲಿವೆ. ಜೀವನ ಕಲುಷಿತಗೊಳ್ಳುತ್ತಲಿದೆ. ಈ ಕಲುಷಿತ ಪರಿಸರವನ್ನು ತಿಳಿಗೊಳಿಸಿದಾಗ ಮಾತ್ರ ಧರ್ಮತೇಜ ಪ್ರಜ್ವಲಿಸುತ್ತದೆ. ದೇಶದಲ್ಲಿ ಭಾವೈಕ್ಯೆ ಮೂಡುತ್ತದೆ. ಭಾರತವು ಧರ್ಮ ಸಹಿಷ್ಣತೆಗೆ ಹೇಳಿ ಮಾಡಿಸಿದಂತಿದೆ. ಇಲ್ಲಿ ಹಿಂದೂ ಧರ್ಮದ ಜೊತೆ ಜೊತೆಗೆ ಇಸ್ಲಾಂ ಕ್ರೈಸ್ತ, ಪಾರ್ಸಿ ಮೊದಲಾದ ಪರರಾಷ್ಟ್ರಗಳ ಧರ್ಮಗಳೂ ಸುರಕ್ಷಿತವಾಗಿರುವವು. ಭಾರತದೇಶವು ಏಕಂಸತ್ ವಿಪ್ರಾಬಹುಧಾವದಂತಿ ಎನ್ನುತ್ತ ಬಂದಿದೆ. ಬಸವಣ್ಣನವರು ದೇವನೊಬ್ಬ ನಾಮಹಲವು ಎಂದು ಸಾರಿದ್ದಾರೆ. ಕಬೀರರು ರಾಮ ರಹೀಮರಲ್ಲಿ ಭೇದವಿಲ್ಲ ಎಂದಿರುವರು. ಮಹಾತ್ಮಾ ಗಾಂಧೀಜಿಯವರಂತೂ ಹಿಂದೂ ಮುಸ್ಲೀಂರಲ್ಲಿ ಐಕ್ಯತೆ ಸಾಧಿಸಿರುವರು. ಅದರಂತೆ ಶ್ರೀಶಂಕರಶೆಟ್ಟಿ. ಪಾಟೀಲರೂ ಕಮಲಾಪೂರದಲ್ಲಿದ್ದು ಈ ಭಾವೈಕ್ಯತೆಯನ್ನು ಮೆರೆದಿರುವರು.

ಮನುಷ್ಯನು ಸಂಘ ಜೀವಿ, ಅವನೆಂದೂ ಒಂಟಿಯಾಗಿ ಬಾಳಲಾರನು. ತಂದೆ–ತಾಯಿ, ಬಂಧು–ಬಳಗ, ಗಂಡ–ಹೆಂಡತಿ, ಮಕ್ಕಳು ಮೊಮ್ಮಕ್ಕಳು ಎಂಬ ಕೌಟುಂಬಿಕ ಸಂಬಂಧ ಬೆಳೆದಂತೆಲ್ಲ ಆತ ಸಂಬಂಧಿತನಾಗಿ ಸಾಮಾಜಿಕವಾಗಿ ಬದುಕುತ್ತಾನೆ. ಊರು–ಕೇರಿ ನೆರೆಹೊರೆ ತಾಲೂಕು–ಜಿಲ್ಲೆ, ರಾಜ್ಯ ರಾಷ್ಟ್ರಗಳ ಪರಸ್ಪರ ಸಂಬಂಧವೂ ರಾಜಕೀಯ ವ್ಯಕ್ತಿಯಲ್ಲಿ ಸಾಮಾಜಿಕ ಸಂಬಂಧ ಬೆಳೆಯುತ್ತ ಹೋಗುತ್ತದೆ. ಅನಾಗರಿಕತೆಯಿಂದ ನಾಗರಿಕತೆ ಮತ್ತು ದಾಪುಗಾಲು ಹಾಕುತ್ತ ಭೂಮಿಯಿಂದ ಆಕಾಶಕ್ಕೆ ಹಾಗೂ ಸಮದ್ರದಾಳಕ್ಕೆ ಹಾರುವ ಇಳಿಮುಖ ಇಂದಿನ ವೈಜ್ಞಾನಿಕ ದಿನಮಾನಗಳಲ್ಲಿಯೂ ಸ್ತ್ರೀಪುರುಷರೆಲ್ಲರೂ ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದುಂಟು.

ಪ್ರತಿಯೊಂದು ಸಮಾಜವು ಹಲವು ಸಂಪ್ರದಾಯಗಳ, ಲೋಕರೂಢಿ ನೀತಿ–ನಿಯಮಗಳನ್ನು ಬೆಳೆಸಿಕೊಂಡು ಬರುತ್ತಿದೆ. ಇವುಗಳಲ್ಲಿ ಕೆಲವೊಂದು ಇನ್ನುಕೆಲವರಿಗೆ ಹಿಡಿಸದಿದ್ರೂ ಬಹಳಷ್ಟು ಜನರು ಒಪ್ಪಿಕೊಂಡಿದ್ದರು ಅವು ಸಾರ್ವತ್ರಿಕ ಮನ್ನಣೆ ಪಡೆದು ಚಲಾವಣೆಯಲ್ಲಿರುತ್ತವೆ. ಕಾಲಾಂತರದಲ್ಲಿ ಅಂಥ ರೂಢಿ–ಸಂಪ್ರದಾಯಗಳು ನೀತಿ–ನಿಯಮಗಳಂತೆಯೆ ರೂಢಿಗತವಾಗುತ್ತವೆ. ಯಾವುದೇ ಸಮಾಜವಿರಲಿ. ಅದಕ್ಕೆ ನೀತಿ ನಿಯಮಗಳು ಇಲ್ಲದಿದ್ದಲ್ಲಿ ವ್ಯಕ್ತಿಗಳ ರಕ್ಷಣೆಯಾಗುತ್ತದೆಂದು ಹೇಳಲು ಬಾರದು. ಅದು

ತಫಲಕನ ದರ್ಬಾರವಾಗುತ್ತದೆ. ಅಂತೆಯೆ ಸಾಮಾಜಿಕ ಬದುಕಿಗಾಗಿ ವಾಲುತ್ತಿರುತ್ತಾರೆ. ಇಂಥ ಸಾಮಾಜಿಕ ಬದುಕಿಗಾಗಿ ತಮ್ಮ ಜೀವನವನ್ನೇ ಮುಡುಪಿಟ್ಟ ಶ್ರೀಶಂಕರ ಶೆಟ್ಟಿ ಪಾಟೀಲರ ಜೀವನ ಅದು ಶ್ರೀಗಂಧದ ಕೊರಡಿನಂತಿರುತ್ತದೆ.

ಭಾರತದೇಶ ಪ್ರಮುಖವಾಗಿ ಒಕ್ಕಲುತನದ ದೇಶವಾಗಿದೆ. ಈ ಪ್ರಮುಖ ಉದ್ಯೋಗದ ಜೊತೆಗೆ ಇತರ ಹಲವಾರು ಉದ್ಯೋಗಗಳೂ ಬೆಳೆದು ಬಂದಿರುತ್ತವೆ. ಒಕ್ಕಲುತನದ ಜೊತೆಗೆ ಹೈನುಗಾರಿಕೆ, ತೋಟಗಾರಿಕೆಯೂ ಬೆಳೆದು ಬರುತ್ತಿರುತ್ತವೆ. ಇಂದು ನಮ್ಮ ದೇಶದಲ್ಲಿ ಭೂಮಿ-ಸೀಮೆ ನೆಲ-ಜಲಕ್ಕೆ ಕೊರತೆಯಿಲ್ಲ. ಕೊರತೆ ಕಂಡರೂ ಅದು ಕೃತ್ರಿಮದ್ದು, ವ್ಯವಸ್ಥೆ ಬದಲಾದರೆ ಎಲ್ಲರೂ ಸುಖ ಕಾಣಬಹುದಾಗಿದೆ. ಕೊರತೆಯಿರುವುದು ದುಡಿಯುವ ಜನರಲ್ಲಿ, ಆ ದುಡಿಮೆಯಲ್ಲಿ ಪ್ರಾಮಾಣಿಕತೆಯಿಲ್ಲದ್ದೇ ದೊಡ್ಡ ಹಗರಣಕ್ಕೆ ಕಾರಣೀಭೂತವಾಗಿದೆ. ಇಂಥ ಅಪ್ರಮಾಣಿಕತೆಯ ಅವಿಶ್ವಾಸ ದೋಷದಿಂದಾಗಿ ಕೈಗೊಳ್ಳುತ್ತಿರುವ ಯೋಜನೆಗಳೆಲ್ಲ ಸೋರಿಹೋಗುತ್ತಿವೆ.

ಭ್ರಷ್ಟಾಚಾರ ಹೆಚ್ಚಾಗಿ ಸ್ವಾರ್ಥಮಿತಿಮೀರುತ್ತ ಹೋಗುತ್ತಲಿರುವುದರಿಂದ ದೇಶದ ಅಭಿವೃದ್ದಿ ಕುಂಠಿತಗೊಳುತ್ತಲಿದೆ. ಈ ದೇಶದಲ್ಲಿ ನಮ್ಮ ನೇತಾರರು, ಸಂಸದರು ಸಮಾಜದಲ್ಲಿ, ದೇಶದ ಜನತೆಯಲ್ಲಿ ಬೇರುಬಿಟ್ಟದ್ದನ್ನು ಗುರುತಿಸಿ ಬೇರುಸಹಿತ ಕಿತ್ತೊಗೆಯುವಲ್ಲಿ ಧೀರರಾಗಬೇಕಾಗಿದೆ. ಹಳೆಯ ತಲೆಮಾರಿನ ಮುಖಂಡರಲ್ಲಿ ಚಾರಿತ್ರಶುದ್ದಿಯ ಕೆಚ್ಚು ಇದ್ದುದರಿಂದ ಅವರ ಮಾತಿಗೆ, ಆಡಳಿತಕ್ಕೆ. ಬೆಲೆಯಿತ್ತು. ಶ್ರೀ ಶಂಕರಶೆಟ್ಟಿ ಪಾಟೀಲರಂಥ ಮುಖಂಡರ ನೇತೃತ್ವದಲ್ಲಿ ಸಂಸದಪಟುವಾಗಿ ತಮ್ಮ ಮತಕ್ಷೇತ್ರದ ಅಭಿವೃದ್ಧಿಗೆ ಪ್ರಾಮಾಣಿಕರಾಗಿ ಸೇವೆ ಸಲ್ಲಿಸಿದವರಾಗಿದ್ದಾರೆ.

ಮನುಷ್ಯರಾದ ನಾವು ಬಯಸುವುದು ಪ್ರಾಮುಖ್ಯವಾಗಿ ಸುಖವನ್ನು. ಆ ಸುಖಕ್ಕಾಗಿ ಏನೆಲ್ಲ ಸಾಹಸ ಪಡುತ್ತಲಿದ್ದೇವೆ. ಸಾಲ ಮಾಡಿಯಾದರೂ ತುಪ್ಪ ತಿನ್ನುತ್ತ ಬಂದಿದ್ದೇವೆ. ಹೊಸ ಹೊಸ ಬಟ್ಟೆ ತೊಡುತ್ತಲಿದ್ದೇವೆ. ಸರ್ವ ಸೌಲಭ್ಯದ ಮನೆ ಬೇಕೆಂದು ವಾಸಮಾಡುತ್ತಲಿದ್ದೇವೆ. ಹೀಗೆ ಅನ್ನ, ಅರಿವೆ, ಆಶ್ರಯುಗಳಲ್ಲಿಯೆ ಸುಖವಿದೆ ಎಂದು ಬಗೆದು ಅವುಗಳನ್ನು ಈಡೇರಿಸಿಕೊಳ್ಳಲು ಒಂದು ಉದ್ಯೋಗಕ್ಕೆ ತೊಡಗಿಕೊಳ್ಳತ್ತೇವೆ. ಹಣದಬಲದಿಂದ ಏನೆಲ್ಲ ಪಡೆಯಬಹುದೆಂಬ ಗ್ರಹಿಕೆ ಬರಬರುತ್ತ ಹುಸಿಯಾಗುತ್ತದೆ. ಹೀಗೆ ಪಡೆಯುತ್ತಲಿರುವುದು ಕ್ಷಣಿಕಕಾಲದ ಲೌಕಿಕ ಸುಖವೆಂದು ತಿಳಿದುಬಂದಾಗ ಮತ್ತೆ ಶಾಶ್ವತಸುಖಕ್ಕೆ ಆ ಕಡೆಗೆ ವಾಲುತ್ತೇವೆ. ಇಂಥ ಚಕ್ರ ಸದಾ ತಿರುಗುತ್ತಲೇ ಇರತ್ತದೆ. ಇಳೀತಾ ಹೋದಂತೆಲ್ಲಾ ತಿಳೀತಾ ಬರುತ್ತದೆ, 'ಅಟ್ಟ ಮೇಲೆ ಒಲೆ ಉರಿಯುತ್ತದೆ. ಕೆಟ್ಟಮೇಲೆ ಬುದ್ಧಿ ಬರುತ್ತದೆ,' ಈ ಮಾತುಗಳು

ಹಿರಿಯರ ಲೋಕಾನುಭವದ ಮಾತುಗಳಾಗಿದ್ದರೂ ಅವುಗಳಲ್ಲಿ ನಂಬಿಗೆಯಿಡದೇ ನಮ್ಮ ತಲೆಗೆ ಬಡಿದಾಗಲೇ ನಮಗೆ ಬುದ್ಧಿ ಬರುವಂತಾಗುತ್ತದೆ. ಆಗ ಸದ್ಗುರುವಿನ, ಸತ್ಸಂಗದ ಹುಡುಕಾಟ ಪ್ರಾರಂಭವಾಗುತ್ತದೆ. ಇದನ್ನು ಶಂಕರಶೆಟ್ಟಿ ಪಾಟೀಲರು ತಮ್ಮ ಚಿಕ್ಕ ವಯಸ್ಸಿನಿಂದಲೇ ಸಾಧಿಸುತ್ತ ಬಂದವರಾಗಿದ್ದಾರೆ. ಇಷ್ಟಲಿಂಗೋಪಾಸನೆಯ ಮೂಲಕ ತಾನಾರೆಂಬುದ ಸಾಧಿಸಿದ ಪುಣ್ಯಾತ್ಮರಿವರೆನಿಸಿದ್ದಾರೆ.

'ಏನನಾದಡೆಯೂ ಸಾಧಿಸಬಹುದು
ಮತ್ತೇನನಾದಡೆಯೂ ಸಾಧಿಸಬಹುದಯ್ಯಾ
ತಾನಾರೆಂಬುದ ಸಾಧಿಸಬಾರದು
ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ.'

ಎಂದು ಸಾರಿದ ಬಸವಣ್ಣನವರ ವಚನದಂತೆ ಶಂಕರಶೆಟ್ಟಿ ಪಾಟೀಲರು 'ದಯವೇ ಧರ್ಮದ ಮೂಲವೆಂದು ನಂಬಿ ಮಹಾದೇವನ ಕರುಣೆಯಿಂದ ತಾನಾರೆಂಬುದ ಸಾಧಿಸಿದುದು ಅವರ ಉದಾತ್ತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಸದ್ಗುರುವಿನ ಕೃಪಾಕಟಾಕ್ಷದಿಂದ ಮಾನವೀಯ ಮೌಲ್ಯಗಳನ್ನು ಜೀವನದುದ್ದಕ್ಕೂ ಅಳವಡಿಕೊಂಡು ಮಾನವೀಯತೆಯನ್ನು ಮೆರೆದವರಾಗಿದ್ದಾರೆ.

ಶಂಕರಶೆಟ್ಟಿ ಪಾಟೀಲರು ಪ್ರಜೆಗಳ ಪ್ರತಿನಿಧಿಯಾಗಿದ್ದವರು. ಜನ ಪ್ರತಿನಿಧಿಯೆನಿಸಿದ ಅವರಲ್ಲಿದ್ದ ಪ್ರಮುಖ ಗುಣಗಳನ್ನು ಇಂದಿನ ಯುವಕರು ಮೊದಲು ಮೆಲಕುಹಾಕಬೇಕು. ಅವರು ಚಾರಿತ್ರ ಶುದ್ಧರು. ಅಹಮಿಕೆಯನ್ನೂ ಸ್ವಾರ್ಥವನ್ನೂ ಅಳಿಸಿಹಾಕಿದವರು. ಇನ್ನೊಬ್ಬರ ಧನ ಕನಕಗಳಿಗೆ ಆಸೆ ಮಾಡಿದವರಲ್ಲ. ಮನೆಯಿಂದ ಮೂಲತಃ ಸ್ಥಿತಿವಂತರು, ದುಶ್ಚಟಗಳಿಂದ ದೂರಿದ್ದವರು. ಜನರ ಸುಖ ದುಃಖಗಳಲ್ಲಿ ಸಮಭಾಗಿಗಳಾಗಿ ಇರುವಂಥವರು.ಅಂತೆಯೆ ಜನ ಇವರನ್ನು ತಮ್ಮ ಮತಕ್ಷೇತ್ರದ ಸಂಸದರನ್ನಾಗಿ ಆರಿಸಿತಂದರು. ಸ್ವಾತಂತ್ರ್ಯ ಪ್ರೇಮಿಗಳಿವರು. ಅನ್ಯಾಯದ ವಿರುದ್ಧ ಪ್ರತಿಭಟಿಸುವಂಥವರು. ನ್ಯಾಯನಿಷ್ಠುರರಾಗಿ ಧೈರ್ಯಶಾಲಿಗಳಾದವರಿವರು. ಭ್ರಷ್ಟಾಚಾರ, ಲಂಚಗುಳಿತನಗಳಿಂದ ಇವರು ದೂರು ಇದ್ದವರು. ಅಧ್ಯಾತ್ಮದ ನೀತಿಯ ನೆಲಗಟ್ಟಿನ ಮೇಲೆ ತಮ್ಮ ಬದುಕನ್ನು ಹಸನಾಗಿಟ್ಟುಕೊಂಡವರು. ದೀನ-ದಲಿತರ, ಬಡವರ ಶೋಷಿತರ ಕಷ್ಟನಷ್ಟಗಳನ್ನು ಅರಿತು ತಮ್ಮ ಸ್ವಂತ ಖರ್ಚಿನಲ್ಲಿ ಅವರ ಕೆಲಸ ಕಾರ್ಯಗಳನ್ನು ಸರಕಾರದಿಂದ ಮಾಡಿಸಿಕೊಡುತ್ತಿದ್ದರು.

ಶಂಕರಶೆಟ್ಟಿ ಪಾಟೀಲರು ಆ ಜಾತಿ ಈ ಜಾತಿ ಎಂದು ಭೇದ ಮಾಡದೆ, ಎಲ್ಲರೂ ತನ್ನವರೆಂದೇ ಬಗೆದು, ಜಾತ್ಯತೀತ ಪಾಟೀಲರೆನಿಸಿರುವರು. ವರ್ಗ ವರ್ಣ ಭೇದವನ್ನು

ಅವರೆಂದೂ ಮಾಡಿದವರಲ್ಲ. ಹಲವಾರು ಭಾಷೆಗಳನ್ನು ಬಲ್ಲ ಪಾಟೀಲರು ಮಾತೃಭಾಷೆ ಕನ್ನಡಕ್ಕೆ ವಿಶೇಷ ಗೌರವ ನೀಡುತ್ತಿದ್ದರು. ಸ್ತುತಿ,ನಿಂದೆಗಳು ಬಂದಡೆ ಹಿಗ್ಗದೆ, ಕುಗ್ಗದೆ ಸಮಚಿತ್ತರಾಗಿ, ಸಮಾಧಾನಿಯಾಗಿ ಇರುತ್ತಿದ್ದರು.

"ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂಡಯ್ಯಾ
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕೆ ನಾಚಿದೊಡೆಂತಯ್ಯಾ?
ಸಮುದ್ರದ ತಡೆಯಲೊಂದು ಮನೆಯ ಮಾಡಿ
ನೆರೆ ತೆರೆಗಳಿಗಂಜಿದೊಡೆಂತಯ್ಯ?
ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ ನಿಂದೆಗಳು ಬಂದಡೆ ಮನದಲಿ
ಕೋಪವ ತಾಳದೆ ಸಮಾಧಾನಿಯಾಗಿರಬೇಕು".

ಎಂಬ ಮಹಾದೇವಿಯಕ್ಕನ ವಚನದಂತೆ ಸಮಾಧಾನಿಯಾಗಿರುವ ಪಾಟೀಲರದು ಉದಾತ್ತ ವ್ಯಕ್ತಿತ್ವ. ಇಂಥ ಉದಾತ್ತ ವ್ಯಕ್ತಿತ್ವ ಇದ್ದುದರಿಂದಲೇ ಶ್ರೀಶಂಕರಶೆಟ್ಟಿ ಪಾಟೀಲರನ್ನು ಜನತೆ ಚುನಾವಣೆಯಲ್ಲಿ ಆರಿಸಿ ತಂದದ್ದು. ವಿರೋಧ ಪಕ್ಷದವರು ತೋರುವ ಆಸೆ ಆಮಿಷಗಳಿಗೆ ಬಲಿಯಾಗದೆ ನಿಸ್ವಾರ್ಥ ಸೇವೆ ಸಲ್ಲಿಸುವ ಶ್ರೀಪಾಟೀಲರ ಪರವಾಗಿಯೆ ಮತಚಲಾಯಿಸಿದ ಅಂದಿನ ಕಾಳಗಿ ಮತಕ್ಷೇತ್ರದ ಮತದಾರರೇ ಧನ್ಯರು. ಅವರು ಇಟ್ಟುಕೊಂಡ ನಂಬಿಗೆಯನ್ನು ಗೌಡರು ತೀರಿಸಿದರೆಂದರೆ ಅದು ಅತಿಶಯೋಕ್ತಿಯ ಮಾತಲ್ಲ.

ಶಂಕರ ಶೆಟ್ಟಿ ಪಾಟೀಲರು ಗ್ರಾಮೀಣ ಪ್ರದೇಶದ ಜನರ ನಾಡಿ ಬಲ್ಲವರಾಗಿದ್ದರು. ಸದಾ ಕ್ರಿಯಾಶೀಲ ವ್ಯಕ್ತಿಗಳಾದ ಪಾಟೀಲರು ಜನತೆಯ ಕಲ್ಯಾಣ ಬಯಸುವುದರಲ್ಲಿಯೆ ಕಾಲಕಳೆ ಯುತ್ತಲಿದ್ದರು. ಆರ್ಯ ಸಮಾಜದ, ಕಾಂಗ್ರೆಸ್ಸಿನ ಹಾಗೂ ವೀರಶೈವ ತರುಣ ಸಂಘಗಳ ಸದಸ್ಯರಾಗಿ ಆ ಮೂಲಕ ಹಿಂದೂ ಸಂಸ್ಕೃತಿಯ ಉಳಿಮೆ ಬೆಳಮೆಗಾಗಿ ಶ್ರಮಿಸುತ್ತಲಿದ್ದರು.

ರಾಜ್ಯದ ಸಹಕಾರ ಚಳುವಳಿಯಲ್ಲಿ ಪಾಟೀಲರು ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡವರು. ಆ ಮೂಲಕ ಗ್ರಾಮೀಣ ಜನತೆಗೆ ಸಹಕಾರ ತತ್ವದ ತಿಳುವಳಿಕೆ ಮಾಡಿಕೊಟ್ಟರು. ಆ ಕ್ಷೇತ್ರದ ಸದುಪಯೋಗಪಡಿಸಿಕೊಂಡ ಸಹಕಾರಿ ಕ್ಷೇತ್ರದ ಧುರೀಣರೆನಿಸಿರುವರು.

ಶ್ರೀಶಂಕರಶೆಟ್ಟಿ ಪಾಟೀಲರದು ಸಾಮಾಜಿಕ ಬದುಕು. ತಮ್ಮ ಕುಟುಂಬದ ಸದಸ್ಯರೊಂದಿಗೆ ಹಾಗೂ ಸಮಾಜದ ಬಂಧುಗಳೊಂದಿಗೆ ಪರಸ್ಪರ ಪ್ರೀತಿಯಿಂದ ಬದುಕುವ ಕಲೆಯನ್ನು ಅವರು ಕರಗತ ಮಾಡಿಕೊಂಡಿರುವರು. ಒಂದೇ ತಾಯಿಯ ಹೊಟ್ಟೆಯಿಂದ ಹುಟ್ಟಿದ ಮಕ್ಕಳಿದ್ದರೂ ಒಬ್ಬರ ಸ್ವಭಾವದಂತೆ ಇನ್ನೊಬ್ಬರು ಇರಲಾರರು. ಅವರಿವರ ಆಚಾರ, ವಿಚಾರ–ನಡೆವಳಿಕೆಗಳಲ್ಲಿ ವೈಪರಿತ್ಯಗಳನ್ನು ಕಾಣುತ್ತೇವೆ. ಕೈಯ ಬೆರಳುಗಳೆಲ್ಲವೂ ಸಮ ಇರಲಾರವೊ ಹಾಗೇ ಎಂಬ ಉದಾಹರಣೆ ಕೊಡುತ್ತಾರೆ ಶಂಕರಶೆಟ್ಟಿ ಪಾಟೀಲರು.

ಜೀವನದಲ್ಲಿ ಯಾವಾಗಲೂ ಸುಖವನ್ನೇ ಕಾಣುತ್ತೇವೆಂದೇನಲ್ಲ. ಸುಖಕ್ಕಿಂತ ಹೆಚ್ಚಾಗಿ ದುಃಖವನ್ನೇ ಕಾಣುತ್ತೇವೆ. ಸುಖ–ದುಃಖಗಳ ಈ ಕಾಲಚಕ್ರದಲ್ಲಿ ಸಾಸಿವೆ ಕಾಳಿನಷ್ಟು ಸುಖಕ್ಕೆ ಸಾಗರದಷ್ಟು ದುಃಖ ಪಡಬೇಕಾಗುತ್ತದೆ. ಮನುಷ್ಯ ತಪ್ಪು ಮಾಡುವುದು ಸಹಜ. ಹೀಗೆಂದು ತಪ್ಪುಗಳನ್ನೇ ಮಾಡುತ್ತ ಹೋಗಬಾರದೆನ್ನುತ್ತಾರೆ ಗೌಡರು. ಎಡೆವಾಯ್ದು ಬಂದ ತಪ್ಪು ಹಿಡಿದು ಸಾಧಿಸದೆ ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆವೊಡೆವುದೇ? ಎಂದು ಕವಿ ರಾಘನಾಂಕನ ನುಡಿಮುತ್ತಿನಂತೆ ಗೌಡರು ಮನುಷ್ಯನು ತಪ್ಪುಗಳನ್ನು ತಿದ್ದಿಕೊಳ್ಳಲು ಪ್ರೀತಿಯಿಂದ ತೋರಿಸಿಕೊಡುತ್ತಾರೆ. ಇದು ಪರರಿಗಷ್ಟೇ ಹೇಳುವ ಮಾತಲ್ಲ. ಎಲ್ಲರೂ ಜೀವನದಲ್ಲಿ ಅರಿತು ಅಳವಡಿಸಿಕೊಂಡಾಗ ಅವರ ಬೋಧೆಗೆ ಅರ್ಥವಿರುತ್ತದೆ, ಬೆಲೆ ಬರುತ್ತದೆ.

ಬಸವಣ್ಣನವರು ಸಾರಿದ ವಚನವನ್ನು ಗೌಡರು ಉದಾಹರಿಸುತ್ತಿರುತ್ತಾರೆ.

"ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆ ಮನೆಯವರ ದುಃಖಕ್ಕೆ ಅಳುವವರ
ಮೆಚ್ಚ ಕೂಡಲಸಂಗಮದೇವಾ"

ಸಮಾಜ ಸುಧಾರಕರು, ಆ ಈ ಪಕ್ಷಗಳ ಕಾರ್ಯಕರ್ತರು ಅಷ್ಟೇ ಅಲ್ಲ, ಪ್ರತಿಯೊಬ್ಬರೂ ಮೊದಲು ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳಬೇಕು ಎಂದು ಜನತೆಗೆ ತಿಳಿಸಿಕೊಡುತ್ತಿದ್ದರು. ತಾನು ಒಳ್ಳೆಯವನಾದರೆ ತನಗೆಲ್ಲರೂ ಒಳ್ಳೆಯವರೆಂಬುದನ್ನು ಮಹಾತ್ಮರ ಚರಿತ್ರೆ ಹೇಳುತ್ತ, ಒಳ್ಳೆಯ ರೀತಿಯ ಬದುಕನ್ನು ಸಾಗಿಸಲು ಕರೆಕೊಡುತ್ತಲಿದ್ದರು.

ಗೌಡರು ಮನೆಯಲ್ಲಿ ಮಕ್ಕಳು ತಪ್ಪು ಮಾಡಿದರೆ ಅವರನ್ನು ತಾಯಂದಿರರು ಹೊಡೆದು –ಬಡೆದು ಮಾಡಲು ಹೋಗಬಾರದೆಂದು ಹೇಳುತ್ತಲಿದ್ದರು. ತಪ್ಪು ಮಾಡಿದ ಮಕ್ಕಳಿಗೆ ಪ್ರೀತಿಯಿಂದ ಮೈದಡವಿ, ನಗುತ್ತಾ ಬುದ್ಧಿ ಹೇಳಬೇಕು ಎಂದು ಹೇಳುತ್ತಲಿದ್ದರು. ಈ

ವಿಷಯದಲ್ಲಿ ಒಮ್ಮೊಮ್ಮೆ ಗೌಡರಿಗೂ ಗೌಡಶಿಯವರಿಗೂ ಮಾತು ಬೆಳೆಯುತ್ತ ಹೋಗುತ್ತಿದ್ದವು. ಸ್ವಲ್ಪ ಹೊತ್ತಾದ ಬಳಿಕ ಮತ್ತೆ ತಾವು ಮಾಡಿದ ತಪ್ಪಿನ ಅರಿವಾಗಿ ಸುಧಾರಿಸಿಕೊಳ್ಳುತ್ತಿದ್ದರು. ಮಕ್ಕಳ ಮುಂದೆ ಅವಾಚ್ಯ ಶಬ್ದಗಳಿಂದ ಯಾರನ್ನು ಬೈಯಬಾರದೆಂದೂ ಬುದ್ಧಿವಾದ ಹೇಳುತ್ತಿದ್ದರು. ಸುಂದರ, ಶಾಂತ ಪರಿಸರದಲ್ಲಿ ಮಕ್ಕಳು ಬೆಳೆಯಬೇಕೆನ್ನುತ್ತಿದ್ದರು.

ಶಂಕರಶೆಟ್ಟಿ ಪಾಟೀಲರು ಶಾಸಕರಾಗಿ ಆರಿಸಿ ಬಂದ ಮೇಲೆ ಜನ ಅವರನ್ನು ಅಭಿಮಾನದಿಂದ ಸತ್ಕರಿಸಿದ್ದರು. ಆಗ ಅವರು ಸಭೆಯನ್ನು ಉದ್ದೇಶಿಸಿ ಮಾಡಿದ ಭಾಷಣದ ಸಾರ ಹೀಗಿರುವುದು:

ಮಾನ್ಯ ಮತದಾರ ಬಂಧು ಭಗಿನಿಯರೆ  ಸಮಾರಂಭದ ಅಧ್ಯಕ್ಷತೆ ವಹಿಸಿರುವ ಹನುಮಂತರಾವ ಪಾಟೀಲರೆ,

ಮೊದಲಿಗೆ ನನ್ನನ್ನು ಶಾಸಕನನ್ನಾಗಿ ಚುನಾಯಿಸಿ ತಂದದ್ದಕ್ಕೆ ಎಲ್ಲ ಕಾರ್ಯಕರ್ತರಿಗೂ ನನಗೆ ಮತ ನೀಡಿದ ಎಲ್ಲ ಮತದಾರರಿಗೂ ನಾನು ಆಭಾರಿಯಾಗಿದ್ದೇನೆ. ತಮ್ಮೆಲ್ಲರ ಸೇವೆ ಮಾಡುವ ಈ ಸದವಕಾಶವನ್ನು ಕೆಡಸದೆ ಈ ಪ್ರದೇಶದ ಸರ್ವತೋಮುಖದ ಅಭಿವೃದ್ಧಿಗಾಗಿ ನಾನು ಪ್ರಯತ್ನಿಸುವೆ. ತಮ್ಮೆಲ್ಲರ ಸಹಕಾರ  ಹೆಚ್ಚು ನನಗೆ ದೊರೆಯುತ್ತ ಹೋದರೆ ಹೆಚ್ಚಿನ ಉತ್ಸಾಹದಿಂದ ಕಾರ್ಯ ಮಾಡುತ್ತೇನೆಂದು ಭರವಸೆ ಕೊಡುತ್ತೇನೆ. ಬಹಳ ಮುಖ್ಯವಾದ ಮಾತೊಂದನ್ನು ತಮ್ಮೆಲ್ಲರ ಗಮನಕ್ಕೆ ತರಲು ನಾನು ಬಯಸುತ್ತೇನೆ. ನಮ್ಮ ಸುಖ ನಮ್ಮ ಕೈಯಲ್ಲೇ ಇದೆ, ಅದೇ ದುಡಿತವೇ ದುಡ್ಡಿನ ತಾಯಿ, ಎನ್ನುವ ಮಾತು ಬಸವಾದಿ ಶರಣರು ಇದು ಸತ್ಯ,ಶುದ್ಧವಾದದ್ದಾದರೆ ಅದೇ ಕಾಯಕ ಎಂದು ಕರೆದಿರುವರು. ಅವರು ಹೇಳಿದ ಈ ಕಾಯಕವೇ ಕೈಲಾಸ ಎಂಬ ಮಾತನ್ನು ನೆನಪಿಟ್ಟಕೊಂಡು ನಾವು ಪ್ರಾಮಾಣಿಕರಾಗಿ ದುಡಿಯಬೇಕು. ಆರಾಮ ಕುಂತು ತಿನ್ನುವ ಪ್ರವೃತ್ತಿ ನಿಮ್ಮದಾಗಬಾರದು, ದುಡಿದು ತಿನ್ನುವುದನ್ನು ಬೆಳೆಸಿಕೊಂಡರೆ ನಾವು ಆರ್ಥಿಕವಾಗಿ ಬಲಿಷ್ಠರಾಗುತ್ತೇವೆ. ಹೀಗೆ ಎಲ್ಲರೂ ದುಡಿದರೆ ನಮ್ಮ ರಾಷ್ಟ್ರ ಸಂಪದ್ಭರಿತವಾಗುತ್ತದೆ. ಅದಕ್ಕಾಗಿ ಎಲ್ಲರೂ ದುಡಿಯುವಂತಾಗಬೇಕು.

ನಮ್ಮ ಮೊಗಲಾಯಿ ಪ್ರದೇಶದಲ್ಲಿ ಸರ್ವವೂ ಉರ್ದುಮಯವಾಗಿತ್ತು. ಅದಿಂದು ಕನ್ನಡವಾಗಬೇಕು. ಕನ್ನಡ ಶಾಲೆಗಳು ಪ್ರತಿಯೊಂದು ಹಳ್ಳಿಗೂ ಪ್ರಾರಂಭವಾಗಬೇಕು. ಈ ನಿಟ್ಟಿನಲ್ಲಿ ನಾನು ಸರಕಾರದ ಜೊತೆಗೆ ಹೋರಾಡಿ ಈ ಪ್ರದೇಶದ ಪ್ರತಿಯೊಂದು ಹಳ್ಳಿಗೂ ಶಾಲೆಗಳನ್ನು ತೆರೆಸುವ ಪ್ರಯತ್ನ ಮಾಡುತ್ತೇನೆ. ಹೆಚ್ಚಿನ ಅಭ್ಯಾಸಕ್ಕೆಂದು ದೊಡ್ಡ ದೊಡ್ಡ ಹಳ್ಳಿಗಳಲ್ಲಿ ಹೈಸ್ಕೂಲು ಮತ್ತು ಕಾಲೇಜುಗಳನ್ನು ಪ್ರಾರಂಭಿಸಲು ಕ್ರಮ ಕೈಕೊಳ್ಳುತ್ತೇನೆ. ತಮ್ಮೆಲ್ಲರ ಸಹಕಾರ ನನ್ನ ಮತ್ತು ನನ್ನ ಪಕ್ಷದ ಮೇಲೆ ಸದಾ ಇರಲಿ ಎಂದು ಆಶಿಸುವೆ. ನನ್ನನ್ನು

ಸತ್ಕರಿಸಿದ್ದಕ್ಕೆ ತಮಗೆಲ್ಲ ನನ್ನ ವಂದನೆಗಳನ್ನು ಸಮರ್ಪಿಸುವೆ. ನಾನು ತಮ್ಮೆಲ್ಲರ ಸೇವೆ ಮಾಡಲು ಸಿದ್ಧನಿದ್ದೇನೆ. ತಮಗೆ ಸಾರ್ವಜನಿಕವಾಗಿ ಯಾವುದೇ ಬಗೆಯ ತೊಂದರೆ ತಾಪತ್ರಯಗಳು ಉಂಟಾಗುತ್ತಿದ್ದರೆ ಕೂಡಲೆ ನನಗೆ ತಿಳಿಸಿ, ತಮ್ಮೆಲ್ಲರ ಸೇವೆ ಮಾಡುವ ಸದವಕಾಶ ನನಗೆ ಕೊಡಬೇಕೆಂದು ತಮ್ಮಲ್ಲಿ ಪ್ರಾರ್ಥಿಸುವೆ.

ಶಂಕರಶೆಟ್ಟಿ ಪಾಟೀಲರು ಶಾಸಕರಾಗಿದ್ದಾಗ ತಮ್ಮ ಮತಕ್ಷೇತ್ರದ ಪ್ರತಿಯೊಂದು ಹಳ್ಳಿಗೂ ಸರಕಾರಿ ಶಾಲೆ ಮಂಜೂರ ಮಾಡಿಸಿದರು. ಕಾಳಗಿಯಲ್ಲಿ ಸರಕಾರಿ ಅಸ್ಪತ್ರೆ, ಪೋಲಿಸ ಠಾಣೆ ಪ್ರಾರಂಭಿಸಿದರು. ಕಾಳಗಿಯನ್ನು ರೆವ್ಹೆನ್ಯೂ ಸರ್ಕಲನ್ನಾಗಿ ಮಾಡುವುದರೊಂದಿಗೆ ಅದನ್ನು ತಾಲೂಕ ಸ್ಥಳವನ್ನಾಗಿ ಮಾಡಲು ಬಹಳಷ್ಟು ಪ್ರಯತ್ನಿಸಿದರು. ಇವರ ಕಾಲಾವಧಿಯಲ್ಲಿಯೆ ವಾಸುದೇವರಾವ್ ಸಮಿತಿ ರಚನೆಯಾದದ್ದು, ಹೆಬ್ಬಾಳದಲ್ಲಿ ಸರಕಾರಿ ಆಯುರ್ವೇದ ಆಸ್ಪತ್ರೆ, ಪಶುವೈದ್ಯ ಆಸ್ಪತ್ರೆಗಳನ್ನಲ್ಲದೆ ಕುಡಿಯುವ ನೀರಿಗೆ ವಿದ್ಯುಚ್ಛಕ್ತಿ ಸೌಲಭ್ಯ ಮಾಡಿಸಿದರು. ತಾವರಗೇರಾದಿಂದ ಹರಸೂರ-ಹೆಬ್ಬಾಳ್ ಕಾಳಗಿ ಕೊಡದೂರ ಮಂಗಲಗಿ ರೋಡ ಮಾಡಿಸಿದರು. ಮಾಡಬೂಳ ಕಾಳಗಿ ರೋಡ ಮಾಡಿಸಿದರು. ಗೋಟೂರ ಹತ್ತಿರ ಸೇತುವೆ ಮಂಜೂರ ಮಾಡಿಸಿ ಅಂದು ಪಿ.ಡಬ್ಲ್ಯೂ ಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲರಿಂದ ಅಡಿಗಲ್ಲು ಇಡಿಸಿದರು. ಕಮಲಾಪೂರದಲ್ಲಂತೂ ಶಿಕ್ಷಣದ ಎಲ್ಲ ಸೌಲಭ್ಯಗಳನ್ನು ತಂದುಕೊಟ್ಟರಲ್ಲದೆ ಬಡಹುಡುಗರ ಹಾಸ್ಟೆಲ್ ಪ್ರಾರಂಭಿಸಿದರು. ಇಲ್ಲಿ ತಮ್ಮ ಮತಕ್ಷೇತ್ರದ ಬಡ ಮತ್ತು ಜಾಣ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವ ವ್ಯವಸ್ಥೆ ಮಾಡಿದರು. ಈ ಹಾಸ್ಟೆಲಿನಲ್ಲಿ ಓದಿದ ಅಂದಿನ ವಿದ್ಯಾರ್ಥಿಗಳು ದೇಶದ ದೊಡ್ಡ ದೊಡ್ಡ ಹುದ್ದೆಗಳಲ್ಲಿ ನವಕರಿ ಮಾಡುತ್ತಲಿರುವರು.

ಶಂಕರಶೆಟ್ಟಿ ಪಾಟೀಲರು ಕೋರವಾರ ಅಣಿವೀರ ಭದ್ರೇಶ್ವರ ದೇವಸ್ಥಾನದಲ್ಲಿ, ಅಂದು ಗುಲಬರ್ಗಾದ ಡಿ.ಸಿ. ಆಗಿದ್ದ ಆರ್.ಮಲ್ಲಪ್ಪ ಅವರ ಮೂಲಕ, ಕುಡಿಯುವ ನೀರಿನ ವ್ಯವಸ್ಥೆ ಮಾಡಿಸಿರುವರು.

ಫರತಾಬಾದಿನಿಂದ ತಿಳಗೂಳ ಹೊನ್ನಕಿರಣಗಿ ರಸ್ತೆ ಮಾಡಿಸಿರುವರು. ಫರತಾಬಾದಿನಲ್ಲಿ ಪ್ರೌಢಶಾಲೆ ಮಂಜೂರ ಮಾಡಿಸಿರುವರು. ಫಿರೋಜಾಬಾದದಿಂದ ಹಸನಾಪೂರಕ್ಕೆ ರಸ್ತೆ ಮಾಡಿಸಿರುವರು. ವಡವಟ್ಟಿ ಕೊಡದೂರ ಸಾಲಳ್ಳಿ ಮೊದಲಾದ ನೂರಾರು ಹಳ್ಳಿಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡಿಸಿರುವರು.

ಶಂಕರಶೆಟ್ಟಿ ಪಾಟೀಲರಿಗೆ ಪ್ರಾಮಾಣಿಕರು ಯಾವುದೇ ಮತ ಪಂಥದವರಿರಲಿ, ಅವರನ್ನು ಗೌರವದಿಂದ ಕಾಣುತ್ತಿದ್ದರು. ಅಂದು ಇಂಜಿನಿಯರರಾಗಿದ್ದ ಗುಲಾಬನಬಿ ಎನ್ನುವವರು ಬಹಳೇ ಪ್ರಾಮಾಣಿಕರಿದ್ದರು. ಬಹಳಷ್ಟು ಜನರು ಆಗದವರು, ಅವರನ್ನು ವರ್ಗಮಾಡಿಸಲು

ಪ್ರಯತ್ನಿಸಿದರು, ಗೌಡರು ಸ್ವತಃ ಡಿ.ಸಿ.ಯವರಿಗೆ ಅವರ ಕಾರ್ಯವೈಖರಿ ಹಾಗೂ ಪ್ರಾಮಾಣಿಕತೆಯ ಮಾಹಿತಿ ನೀಡಿ ಅವರನ್ನು ಅಲ್ಲಿಯೇ ಉಳಿಸಿಕೊಂಡರು. ಮುಂದೆ ಅವರು ಈ ಜಿಲ್ಲೆಯಲ್ಲಿಯೆ ಬಡ್ತಿ ಪಡೆದದ್ದನ್ನೂ ಸ್ಮರಿಸಬಹುದಾಗಿದೆ.

ಅಂದು ಶಂಕರಶೆಟ್ಟಿ ಪಾಟೀಲರ ಜೊತೆಗೆ ಚುನಾವಣೆಯಲ್ಲಿ ದುಡಿದವರು ನೂರಾರು ಜನ ಕಾರ್ಯಕರ್ತರು. ಇವರಲ್ಲಿ ಎಲ್ಲ ಜಾತಿ ಜನಾಂಗದವರೂ ಇದ್ದರು. ಹೀಗಾಗಿ ಶಂಕರಶೆಟ್ಟಿ ಪಾಟೀಲರು ಹೆಚ್ಚಿನ ದುಂದುವೆಚ್ಚವಿಲ್ಲದೇ ಚುನಾವಣೆಯಲ್ಲಿ ಆರಿಸಿ ಬಂದರು. ಅಂದು ಅವರ ಚುನಾವಣೆ ವೆಚ್ಚ ಸಾವಿರ ಎರಡು ಸಾವಿರದಷ್ಟು ಮಾತ್ರವೆಂದು ಗೌಡರು ಈಗಲೂ ನೆನಪಿಸಿಕೊಳ್ಳುತ್ತಾರೆ. ಇವರ ಜೊತೆಗೆ ಅಂದು ಕೆಲಸಮಾಡಿದವರಲ್ಲಿ ಹೆಬ್ಬಾಳದ ಹನುಮಂತರಾವ ಪಾಟೀಲ, ಗುಂಡಪ್ಪ ಮುತ್ತಿನ, ಕಾಳಗಿ ಪಾಟೀಲ ಕಾಳಪ್ಪ, ಗೋಟೂರ ಗುಡದಪ್ಪ, ನಡಗಟ್ಟಿ,ಪೋಲಿಸಗೌಡರು. ಅಣಿವೀರಯ್ಯ ಬೆಟಸೂರ ಗೋಪಾಳ ದೇವ ನಾಯಕ ನೀಲಕಂಠರಾವ, ಕಂದಗೂಳ ಅರಣಕಲ್ ಗೌಡರು, ರಾಮರಾವ ದೇಸಾಯಿ, ದೇವೇಂದಪ್ಪ ಅರಣಕಲ್, ಹರಸೂರ ಉಜ್ಯಾಸಾಹುಕಾರರು, ಗೌಡರು ವೊದಲಾದವರು ಪ್ರಮುಖರಾಗಿರುವರು.

ಶಂಕರಶೆಟ್ಟಿ ಪಾಟೀಲರು ವಿಚಾರವಂತರು, ಅನುಭಾವಿಗಳು, ಕಾಯ್ದೆ ಕಾನೂನು ಪಂಡಿತರು. ತಂದೆಯವರಿಂದಲೇ ಆ ಕಾಯ್ದೆ ಕಾನೂನುಗಳ ಅರಿವು ಮೂಡಿಸಿಕೊಂಡಿದ್ದರು. ಆ ಕಾನೂನು ಚೌಕಟ್ಟಿನಲ್ಲಿ ಸರಕಾರದಿಂದ ದೊರೆಯಬೇಕಾದ ಸೌಲಭ್ಯಗಳೆಲ್ಲವನ್ನೂ ಈ ಜನತೆಗೆ ಒದಗಿಸಿಕೊಟ್ಟರು. ಹೀಗಾಗಿ ಎಲ್ಲರ ಬಾಯಲ್ಲೂ ಕಮಲಾಪೂರದ ಹೆಸರೇ ಹೆಸರು.

ಶಂಕರಶೆಟ್ಟಿ ಪಾಟೀಲರ ಗೆಳೆಯರ ಬಳಗದೊಡ್ಡದು, ಅವರು ಎಲ್ಲಿಯೆ ಹೋಗಲಿ ಎಲ್ಲರೂ ಕೂಡಿಯೆ ಇರುವವರು. ಇವರಲ್ಲಿ ಪ್ರಮುಖರಾದವರೆಂದರೆ ಮಹಾಗಾಂವದ ಶರಣಯ್ಯ ಸ್ವಾಮಿ, ರುದ್ರಶೆಟ್ಟಿ ಪಾಟೀಲ, ಸಿದ್ಧವೀರಯ್ಯ ಬಂಡೆ ಬೆಂಬಳ ಹಾಗೂ ಡಾ.ಸಿದ್ಧಲಿಂಗಪ್ಪ ಪಾಟೀಲ, ರೊಟ್ನಡಗಿ ಇವರಾಗಿದ್ದರು. ಈ ಸ್ನೇಹಿತರು ಆಗಾಗ ಧಾರ್ಮಿಕ ಸಾಂಸ್ಕೃತಿಕ ಸಾಹಿತ್ಯಿಕ ಹಾಗೂ ಸಾಮಾಜಿಕ ಕಾರ್ಯಕ್ರಮಗಳಿಗೂ ಹೋಗಿ ಬರತ್ತಲಿದ್ದರು. ದೂರದೂರದ ಪ್ರಕೃತಿ ಸೌಂದರ್ಯದ, ತೀರ್ಥಕ್ಷೇತ್ರ ಸ್ಥಳಗಳಿಗೂ ಹೋಗಿ ಬರುವ ರೂಢಿಯಿಟ್ಟುಕೊಂಡಿದ್ದರು. ಸಿದ್ಧವೀರಯ್ಯನವರು ಒಮ್ಮೆ ಧಾರವಾಡದ ಮಹಾಂತ ಅಪ್ಪಗಳ ದರ್ಶನಾಶೀರ್ವಾದ ಪಡೆದು ಅಲ್ಲಿಯ ಸಾಂಸ್ಕೃತಿಕ ಶಿಬಿರವೊಂದರಲ್ಲಿ ಭಾಗವಹಿಸಿ ಬಂದ ಅನುಭವವನ್ನು ಒಮ್ಮೆ ನನಗೆ ಹೇಳಿದ್ದರು. ಆಗ ಅಲ್ಲಿ ಪಂ.ನಾಗಭೂಷಣ ಶಾಸ್ತ್ರಿಗಳವರನ್ನೂ ಭೆಟ್ಟಿಮಾಡಿ ಕಮಲಾಪೂರಕ್ಕೆ ಬರಲು ಗೌಡರು ಕೇಳಿಕೊಂಡಿದ್ದರಂತೆ, ಆ ಪ್ರಕಾರ ದಿ.೧೯.೦೫.೧೯೭೨ರಂದು ಕಮಲಾಪೂರದ ಎಸ್.ಟಿ.ಬಿ.ಟಿ.ಕಟ್ಟಡದಲ್ಲಿ ಅಖಿಲ ಭಾರತ

ಶಿವಾನುಭವ ಮಂಟಪದ ತರಬೇತಿ ಶಿಬಿರವನ್ನು ನೆರವೇರಿಸಿದ್ದರು. ರಾಷ್ಟ್ರದ ನಾನಾ ಭಾಗಗಳಿಂದ ನೂರಾರು ಶಿಬಿರಾರ್ಥಿಗಳು ಬಂದು ಪಾಲ್ಗೊಂಡಿದ್ದರು. ಅದರಲ್ಲಿ ಹೈದ್ರಾಬಾದ ಕರ್ನಾಟಕದಿಂದ ಬಹಳಷ್ಟು ಜನ ಶಿಬಿರಕ್ಕೆ ಆಗಮಿಸಿದ್ದರು. ಈ ಶಿಬಿರವು ಮುರುಘಾಮಠದ ಪರಮಪೂಜ್ಯ ಶ್ರೀಮ.ನಿ.ಪ್ರ.ಮಹಾಂತ ಅಪ್ಪಗಳ ನೇತೃತ್ವದಲ್ಲಿ ನಡೆಯಿತು. ಭಾಲ್ಕಿಯ ಪಟ್ಟದ್ದೇವರು ಅತಿಥಿಗಳಾಗಿ, ಮುಖ್ಯ ಬೋಧಕರಾಗಿ ಆಗಮಿಸಿದ್ದರು. ಒಂದುವಾರ ಈ ಶಿಬಿರ ನಡೆದಿತ್ತು.

ಶಂಕರಶೆಟ್ಟಿ ಪಾಟೀಲರು ಶಿಬಿರಗಳನ್ನು ಚೆನ್ನಾಗಿ ಏರ್ಪಡಿಸುತ್ತಲಿದ್ದರು. ಈ ಶಿಬಿರಕ್ಕೆ ಧಾರವಾಡ ಮುರುಘಾಮಠದ ಪೂಜ್ಯ ಶ್ರೀಮ.ನಿ.ಪ್ರ ಮಹಾಂತ ಅಪ್ಪಗಳು ಮತ್ತು ಭಾಲ್ಕಿಯ ಪಟ್ಟದ್ದೇವರು ದಯಮಾಡಿಸಿದ್ದರು. ಭಕ್ತರ ಇಚ್ಛೆಯಂತೆ ಈ ಶಿಬಿರದಲ್ಲಿ ಪ್ರತಿ ನಿತ್ಯ ಅರ್ಚನ ಅರ್ಪಣ ಅನುಭಾವ, ಪಾದೋದಕ ಪ್ರಸಾದ, ಶಿವಾನುಭವ ಚರ್ಚೆ ನಡೆಯುತ್ತಿತ್ತು. ಉಪಾಹಾರ ಹಾಗೂ ಎರಡು ಹೊತ್ತು ಪ್ರಸಾದ ವ್ಯವಸ್ಥಿತ ರೀತಿಯಿಂದ ನಡೆಸಿಕೊಂಡು ಹೋಗುತ್ತಿದ್ದರು. ಶಿಬಿರದ ಖರ್ಚು ವೆಚ್ಚಕ್ಕೆಂದು ಶ್ರೀಶಂಕರಶೆಟ್ಟಿ ಪಾಟೀಲರು ಒಂದು ಸಮಿತಿ ಏರ್ಪಡಿಸಿದ್ದರು. ಈ ಸಮಿತಿಯು ಊರಲ್ಲಿ ಇದ್ದುಳ್ಳವರಿಂದ ವಂತಿಗೆ ಕೂಡಿಸಿ ಖರ್ಚುವೆಚ್ಚ ನೋಡಿಕೊಳ್ಳುತ್ತಿತ್ತು. ಕಡಿಮೆ ಬಿದ್ದರೆ ಗೌಡರ ಮನೆಯಿಂದ ಅನಾಜವಗೈರೆ ತರುತ್ತಿದ್ದರು. ಶಿಬಿರಾರ್ಥಿಗಳು ಪಂ.ನಾಗಭೂಷಣ ಶಾಸ್ತ್ರಿಗಳಿಗೆ ಹಲವಾರು ಪ್ರಶ್ನೆಗಳನ್ನು ಕೇಳಿ ತಮ್ಮ ಸಮಸ್ಯೆಗಳಿಗೆ ಉತ್ತರ ಪಡೆದುಕೊಂಡು ಸಂತೋಷ ಪಡುತ್ತಲಿದ್ದರು. ಶಿಬಿರಾರ್ಥಿಗಳ ಜೊತೆಗೆ ಹಿರಿಯರಾದ ಶ್ರೀಶಂಕರಶೆಟ್ಟಿ ಪಾಟೀಲ, ಶರಣಯ್ಯ ಸ್ವಾಮಿ, ಸಿದ್ಧವೀರಯ್ಯ ರುದ್ರಶೆಟ್ಟಿ ಪಾಟೀಲ, ಡಾ.ಸಿದ್ಧಲಿಂಗಪ್ಪ ಮೊದಲಾದವರು ಇದ್ದೇ ಇರುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಚರ್ಚೆಯಲ್ಲಿ ಈ ಹಿರಿಯರೂ ಭಾಗವಹಿಸುತ್ತಲಿದ್ದರು.

ಸಾರ್ವಜನಿಕರಿಗಾಗಿ ಪ್ರತಿದಿನವೂ ಸಾಯಂಕಾಲ ೬ಗಂಟೆಗೆ ಊರ ಮಧ್ಯದಲ್ಲಿ ಪಂ.ನಾಗಭೂಷಣ ಶಾಸ್ತ್ರಿಗಳ ಪ್ರವಚನ ಏರ್ಪಡಿಸುತ್ತಲಿದ್ದರು. ಇವರ ಪ್ರಭಾವ ಊರವರ ಮೇಲೆ ಬಹಳಷ್ಟು ಆದದ್ದನ್ನು ಗುರುತಿಸಬಹುದಾಗಿದೆ. ದೇವರದಾಸಿಮಯ್ಯನ ಪ್ರವಚನ ಊರವರಿಗೆಲ್ಲ ಹಿಡಿಸಿದುದನ್ನು ಇಲ್ಲಿ ಸ್ಮರಿಸಬಹುದು.

ಕ್ರಿ.ಶ.೧೯೬೭ರಲ್ಲಿ ಶ್ರೀಶಂಕರಶೆಟ್ಟಿ ಪಾಟೀಲರ ತುಂಬು ಜೀವನದ ಸವಿನೆನಪಿಗಾಗಿ ವರ್ಧಂತಿ ಮಹೋತ್ಸವವೊಂದನ್ನು ಕಮಲಾಪೂರದ ಎಲ್ಲ ಜನರೂ ಒಂದಾಗಿ, ಅತ್ಯಂತ ಉತ್ಸಾಹದಿಂದ ಆಚರಿಸಿದುದು ಕಮಲಾಪೂರ ಗ್ರಾಮದ ಒಂದು ಇತಿಹಾಸವಾಗಿದೆ. ಷ.ಬ್ರ.ಶ್ರೀಚನ್ನವೀರ ಶಿವಾಚಾರ್ಯರು ಹಾರಕೂಡ ಗೌರವಾಧ್ಯಕ್ಷರಾಗಿ ಶ್ರೀಮಾಲಿಪಾಟೀಲ ಶಂಕರಶೆಟ್ಟರು ಉಪಾಧ್ಯಕ್ಷರು ಆಗಿದ್ದ ಈ ಸಮಿತಿಯ ಸ್ವಾಗತಾಧ್ಯಕ್ಷರಾಗಿ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ ಅವರಿದ್ದರು. ಈ ಶುಭಗಳಿಗೆಯಲ್ಲಿ ಅವರಿಗೆ ಸಮಸ್ತ ಜನತೆಯ ಪರವಾಗಿ

ಅಭಿನಂದನ ಗ್ರಂಥವೊಂದನ್ನು ಅರ್ಪಿಸಲು ತೀರ್ಮಾನಿಸಿ ಆದರ ಸಂಪಾದನಾ ಕಾರ್ಯವನ್ನು ನನಗೆ ವಹಿಸಿಕೊಟ್ಟಿದ್ದರು. ಆ ಸಂದರ್ಭದಲ್ಲಿ ಶಂಕರಶೆಟ್ಟಿ ಪೋಲಿಸಪಾಟೀಲರ ಸಂದರ್ಶನ ಪಡೆಯಲು ಹೋದಾಗ ಅವರ ನಿಕಟ ಸಂಪರ್ಕ ಬೆಳೆಯಿತು. ಕಮಲಾಪೂರದ ಅವರ ಮನೆಗೆ ಹೋಗಿ ದಾಸೋಹದ ಮಹಾಮನೆಯ ಸವಿಯನ್ನುಂಡು ಧನ್ಯನಾದೆ. ಆಗ ಅವರು ಹೇಳಿದ್ದು "ಇಂದಿನ ಆರಾಜಕತೆಗೆ ಮುಖ್ಯ ಕಾರಣ, ಜನಸಾಮಾನ್ಯರಲ್ಲಿ ವಿಶೇಷವಾಗಿ ರಾಜಕಾರಣಿಗಳು, ಅಧಿಕಾರಿಗಳು, ವರ್ತಕರು, ಉದ್ಯಮಿದಾರರು, ವೈದ್ಯರು ಮೊದಲಾದವರಲ್ಲಿ ನೈತಿಕ ಪ್ರಜ್ಞೆ ಇಲ್ಲದ್ದು. ಅವರು ನೀತಿ ನಡಾವಳಿಯಲ್ಲಿ ಪರಿಶುದ್ಧರಾದರೆ ರಾಷ್ಟ್ರ ಸರ್ವದರಲ್ಲೂ ಅಭಿವೃದ್ಧಿ ಹೊಂದುತ್ತದೆ." ಎಂದು ಹೇಳಿದ್ದು ನನ್ನ ಸ್ಮೃತಿಪಟಲದಲ್ಲಿ ಈಗಲೂ ನಿನಾದಿಸುತ್ತಲಿದೆ– ಬೇಲಿಯೆ ಎದ್ದು ಹೊಲ ಮೆಯದರೆ, ತಾಯಿ ಮೊಲೆಹಾಲ ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವುದು?' ಆ ಸಂದರ್ಶನದಲ್ಲಿ ಗೌಡರು ತಮ್ಮ ಜೀವನದ ಸಿಹಿ ಕಹಿಗಳನ್ನು ಹೇಳಿದ್ದನ್ನು ಕೇಳಿ ತಬ್ಬಿಬ್ಬಾಗಿದ್ದೆ. ದೇಶಕಟ್ಟುವವರಿಗೆ ಇದು ರಾಮಬಾಣವಿದ್ದಂತೆ.

ಹೌದು ವಿಧಾನ ಸೌಧದಲ್ಲಿ ಪ್ರಶ್ನೆ ಕೇಳಿರುವಿರಾ? ಎಂದು ಕೇಳಿದ್ದಕ್ಕೆ ಹೌದು ಎನ್ನುತ್ತಾರೆ. ಅಲ್ಲಿ ವರದಿಗಳನ್ನು ಪರಿಶೀಲಿಸಿದಾಗ ಆ ಪ್ರಶ್ನೆಗಳು ಇಲ್ಲದ್ದು ಕಂಡು ಬಂತು. ಭಾಷಣ ಮಾಡಿದ್ದೀರಾ ಎಂಬುದಕ್ಕೂ ಮಾಡಿದ್ದೇನೆ ಎಂದೇ ಹೇಳಿದರು. ಮತ್ತೂ ಒಮ್ಮೆ ೮–೧೦ ದಿನ ಕುಳಿತು ವರದಿಗಳನ್ನು ಎಲ್.ಹೆಚ್.ದಲ್ಲಿ ಪರಿಶೀಲಿಸಿದರೆ ಅದಕ್ಕೆ ಉತ್ತರ ಸಿಗಲಿಲ್ಲ. ಶ್ರೀಶಂಕರಶೆಟ್ಟಿ ಪಾಟೀಲರೇನು ಭಾಷಣಕಾರರಲ್ಲ. ಆದರೆ ಒಳ್ಳೆಯ ಆಚಾರವಂತರು, ವಿಚಾರಶೀಲರು. ಧೈರ್ಯದಿಂದ ಏನೆಲ್ಲವನ್ನೂ ಎದುರಿಸುವ ಛಲವಂತರು.

ಶಂಕರಶೆಟ್ಟಿ ಪಾಟೀಲರು ಹುಟ್ಟಿಬೆಳೆದ ಕಮಲಾಪೂರ ಗ್ರಾಮಕ್ಕೆ ಹೆತ್ತ ತಂದೆತಾಯಿಗಳಿಗೆ ಕೀರ್ತಿತಂದಿದ್ದಾರೆ. ಕಮಲಾಪೂರ ಗ್ರಾಮದ ಪೋಲಿಸ ಪಾಟೀಲರಾಗಿ, ಕಲಬುರ್ಗಿ ತಾಲೂಕ ಕಾಂಗ್ರೇಸ್ ಸಮಿತಿಯ ಕಾರ್ಯದರ್ಶಿಯಾಗಿ, ಕಾಳಗಿ ಮತಕ್ಷೇತ್ರದ ಶಾಸಕರಾಗಿ, ಈ ಭಾಗದ ಸರ್ವತೋಮುಖದ ಅಭಿವೃದ್ಧಿಗಾಗಿ ವಿಶೇಷ ಸೇವೆ ಸಲ್ಲಿಸಿದವರಾಗಿದ್ದಾರೆ. ಅವರ ಜೀವನದ ಹೆಜ್ಜೆಗಳು ಯುವಕರಿಗೆ ಮೈಲುಗಲ್ಲುಗಳಾಗಿವೆ. ಅವರದು ವಿಶ್ವವಿಶಾಲ ಹೃದಯ, ಮಾನವೀಯತೆಯನ್ನು ಮೆರೆದ ಮಹಾಮಾನವರೆನಿಸಿರುವರು.

ಅಂದಿನ ಕಾಲದಲ್ಲಿ ಊರಗೌಡರೆಂದರೆ ಎಲ್ಲರಿಗೂ ಪಂಚಪ್ರಾಣ. ಅದಕ್ಕೆ ಕಾರಣ ಗೌಡರ ಉದಾತ್ತ ವ್ಯಕ್ತಿತ್ವ, ಅವರ ಚಾರಿತ್ರ್ಯ ಶುದ್ಧಿ, ನಿಸ್ವಾರ್ಥ ಸೇವೆ. ಗೌಡರ ಮಾತೆಂದರೆ ಅಂದು ಎಲ್ಲರೂ ವೇದವಾಕ್ಯವೆಂದು ಪಾಲಿಸುತ್ತಲಿದ್ದರು. ಗ್ರಾಮದ ಶಾಂತಿ ಸವ್ಯವಸ್ಥೆ ಕಾಪಾಡುವ ಹೊಣೆಗಾರಿಕೆಯೂ ಆ ಊರ ಗೌಡರದಾಗಿತ್ತು. ತಪ್ಪು ಮಾಡಿದವರನ್ನು ಗೌಡರು ನಿರ್ದಾಕ್ಷಿಣ್ಯವಾಗಿ ದಂಡಿಸುತ್ತಲಿದ್ದರು. ಗ್ರಾಮದ ಸಮಸ್ಯೆಗಳೇನಿದ್ದರೂ ಗೌಡರೇ

ನ್ಯಾಯಾಧೀಶರಾಗಿ ಬಗೆಹರಿಸುತ್ತಲಿದ್ದರು. ಅವರ ಮಾತಿಗೆ ಬೆಲೆಯಿರುತ್ತಿತ್ತು. ಮೇಲಾಧಿಕಾರಿಗಳೂ ಸರಕಾರವೂ ಗೌಡರಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿತ್ತು.

ಜನಸೇವೆಯೆ ಜನಾರ್ಧನನ ಸೇವೆ ಎಂದು ಬಗೆದ ನಮ್ಮ ಕಮಲಾಪೂರದ ಶಂಕರಶೆಟ್ಟಿ ಪಾಟೀಲರು ಕಮಲಾಪರ ಗ್ರಾಮದ ಗೌಡರಾಗಿ, ಕಾಳಗಿ ಮತಕ್ಷೇತ್ರದ ಸಂಸದ ಪಟುಗಳಾಗಿ ಜನತೆಯ ಕಲ್ಯಾಣ ಬಯಸಿದರು. ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದರು.

ತಮ್ಮ ತೊಂಬತ್ತರ ವಯಸ್ಸಿನಲ್ಲಿಯೂ ಶ್ರೀ ಶಂಕರಶೆಟ್ಟಿ ಪಾಟೀಲರು ಲವಲವಿಕೆಯಿಂದ ತಮ್ಮ ಬಳಗದವರೊಂದಿಗೆ, ಸಮಾಜದೊಂದಿಗೆ ಒಂದಾಗಿ, ಚೆಂದಾಗಿ ಬದುಕುತ್ತಿರುವುದು ಕನ್ನಡಿಗರ ಸೌಭಾಗ್ಯ. ಅವರು ಶತಾಯುಷಿಗಳಾಗಲಿ ಎಂದು ಪ್ರಾರ್ಥಿಸುವೆ.

## ಕಲಬುರ್ಗಿ ಜಿಲ್ಲೆಯ, ಕಮಲಾಪೂರ ಗ್ರಾಮದ ಹಿರಿಯರಾದ, ಮಾಜಿ ಶಾಸಕರಾದ, ನಿಸ್ವಾರ್ಥ ಸಮಾಜ ಸೇವಕರಾದ

### ಶ್ರೀಶಂಕರಶೆಟ್ಟಿ ಪಾಟೀಲ

ಅವರಿಗೆ, ವರ್ಧಂತಿ ಮಹೋತ್ಸವ ಸಮಿತಿಯು, ಕಮಲಾಪೂರ ಮತ್ತು ಸುತ್ತಮುತ್ತಲಿನ ಸಮಸ್ತ ಜನತೆಯ ಪರವಾಗಿ ೧೯೯೬ ರಲ್ಲಿ ಸಮರ್ಪಿಸಿದ

### ಸನ್ಮಾನ ಪತ್ರ

ಶ್ರೀಶಂಕರಶೆಟ್ಟಿ ಪಾಟೀಲರು ಕಲ್ಯಾಣ ನಾಡಿನ ಕಮಲಾಪೂರ ಗ್ರಾಮದ ಪೋಲೀಸಪಾಟೀಲರಾಗಿ, ಕಾಳಗಿ ಮತಕ್ಷೇತ್ರದ ವಿಧಾನಸಭಾ ಸದಸ್ಯರಾಗಿ, ಸಮಾಜಸೇವಾ ಕಾರ್ಯಕರ್ತರಾಗಿ ಸಲ್ಲಿಸಿದ ಮಹತ್ತರ ಸೇವೆಯನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತ ಅವರ ಎಂಬತ್ತು ವರುಷಗಳ ತುಂಬು ಜೀವನದ ಈ ವರ್ಧಂತಿ ಮಹೋತ್ಸವದ ಶುಭಗಳಿಗೆಯಲ್ಲಿ ಸಮಸ್ತ ಗುರು–ಹಿರಿಯರ, ಜನತೆಯ ಹಾಗೂ ವರ್ಧಂತಿ ಮಹೋತ್ಸವ ಸಮಿತಿಯ ಪರವಾಗಿ ಈ ಸನ್ಮಾನ ಪತ್ರವನ್ನು ಸಮರ್ಪಿಸಲು ನಮಗೆ ಅತ್ಯಂತ ಸಂತೋಷವೂ ಹೆಮ್ಮೆಯೂ ಎನಿಸುತ್ತದೆ.

**ಸುಸಂಸ್ಕೃತ ಮನೆತನದ ಸತ್ಪುತ್ರರೆ,**

ಕಲಬುರ್ಗಿ ಜಿಲ್ಲೆಯ ಕಮಲಾಪೂರ ಗ್ರಾಮದ ರಾಚಪ್ಪಗೌಡರು ಸುಸಂಸ್ಕೃತರು, ವಿದ್ಯಾಪ್ರೇಮಿಗಳು. ಇವರಿಗೆ ಬಸಮ್ಮತಾಯಿ ಸಾಧ್ವಿಮಣಿ ಸತಿಯಾಗಿದ್ದರು. ಈ ದಂಪತಿಗಳಿಗೆ ಜೇಷ್ಠ ಸತ್ಪುತ್ರರಾಗಿ ತಾವು ದಿ:೧೮–೪–೧೯೧೬ ರಂದು ಜನ್ಮ ತಾಳಿರುವಿರಿ.

## ಆದರ್ಶ ವಿದ್ಯಾರ್ಥಿಗಳೆ,

ತಂದೆ ರಾಚಪ್ಪಗೌಡರ ಹಾಗೂ ತಾಯಿ ಬಸಮ್ಮನವರ ಪಾಲನೆ ಪೋಷಣೆಯಲ್ಲಿ ಬೆಳೆದುಬಂದ ತಾವು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಮಲಾಪೂರ ಗ್ರಾಮದಲ್ಲಿ ಹಾಗೂ ಮಾಧ್ಯಮಿಕ ವಿದ್ಯಾಭಾಸ್ಯವನ್ನು ಕಲಬುರ್ಗಿಯಲ್ಲಿ ಪಡೆದಿರಿ. ತಂದೆಯವರ ಅಭಿಲಾಷೆಯಂತೆ ಮೋಡಿ, ಮರಾಠಿ ಭಾಷೆಗಳನ್ನು ಖಾಸಗಿ ಶಾಲೆಯಲ್ಲಿ ಪಡೆದಿರಿ. ಐಚ್ಛಿಕ ಭಾಷೆಯಾಗಿ ಫಾರಸಿಯನ್ನೂ ಕಲಿತುಕೊಂಡಿರಿ. ತಂದೆಯವರ ಕಣ್ಣರಿಕೆಯಲ್ಲಿ ಲೆಕ್ಕಪತ್ರ ವ್ಯವಹಾರವನ್ನೂ ರೂಢಿಸಿಕೊಂಡಿರಿ. ನವಾಬರ ಪ್ರಭುತ್ವಕ್ಕೊಳಪಟ್ಟ ಅಂದು ಉರ್ದು ಮಾಧ್ಯಮದಲ್ಲಿ ತಮ್ಮ ಶಿಕ್ಷಣವಾದುದರಿಂದ ಮನೆಯ ಗುರುಗಳಿಂದ ಕನ್ನಡವನ್ನೂ ಅಭ್ಯಾಸಮಾಡಿದಿರಿ. ಹೀಗೆ ಕನ್ನಡ, ಉರ್ದು, ಫಾರಸಿ, ಮರಾಠಿ ಭಾಷೆಗಳ ಜೊತೆಗೆ ಹಿಂದಿ, ಇಂಗ್ಲೀಷ ಭಾಷೆಗಳನ್ನೂ ಅಷ್ಟಿಷ್ಟು ತಿಳಿದುಕೊಂಡಿರುವಿರಿ. ಅಂದು ತಮ್ಮನ್ನು ಅಂತೆಯೆ, ಬಹುಭಾಷಾ ಪಂಡಿತ 'ಹರಫನ್ ಮೌಲಾ' ಎಂದು ಕರೆದು ಗೌರವಿಸಿದರು. ಪಠ್ಯ ಅಭ್ಯಾಸದ ಜೊತೆಗೆ ಪಠ್ಯೇತರ ಚಟುವಟಿಕೆಗಳಲ್ಲಿಯೂ ತಮ್ಮದು ವಿಶೇಷ ಆಸಕ್ತಿ.ಅಂತೆಯೆ ಶಾಲೆಯಲ್ಲಿ ಆದರ್ಶ ವಿದ್ಯಾರ್ಥಿಯಾಗಿ ಪರಿಗಣಿತರಾದಿರಿ.

## ತಂದೆ ರಾಚಪ್ಪ ಗೌಡರಿಗೆ ತಕ್ಕ ಪುತ್ರರಾದ ಶ್ರೀಶಂಕರಶೆಟ್ಟರೆ,

ತಮ್ಮ ತಂದೆ ರಾಚಪ್ಪಗೌಡರು ಮೂಲತಃ ನಿರ್ಣಾ ಗ್ರಾಮದವರು. ಸೋದರತ್ತೆಯ ಮನೆತನ ಈ ಕಮಲಾಪೂರ ಗ್ರಾಮ. ಈ ಮನೆತನಕ್ಕೆ ಬಂದ ರಾಚಪ್ಪಗೌಡರು ಸುಸಂಸ್ಕೃತರು, ಚಾರಿತ್ರ್ಯಶೀಲರು. ಕಾಯ್ದೆ–ಕಾನೂನುಗಳ ಪಂಡಿತರೂ ಆಗಿದ್ದರು. ಈ ಗ್ರಾಮದ ಪೋಲಿಸಗೌಡರಾಗಿಯೂ ಕೆಲಸ ಮಾಡುತ್ತ ಜನಾನುರಾಗಿಯಾಗಿ, ವಿದ್ಯಾಪ್ರೇಮಿಗಳೂ ಆಗಿರುವಿರಿ. ತಾವು ಇನ್ನೂ ಚಿಕ್ಕವರಿದ್ದಾಗ ಮ್ಯಾಟ್ರಿಕ್ ವರ್ಗದಲ್ಲಿ ಓದುತ್ತಿದ್ದಾಗ ಅಕಸ್ಮಾತ್ ತಂದೆಯವರು ಲಿಂಗೈಕ್ಯರಾದುದರಿಂದ ತಮ್ಮ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಬೇಕಾಗಿ ಬಂದಿತು. ತಾವೇ ಜೇಷ್ಠಪುತ್ರರಾದುದರಿಂದ ಮನೆತನದ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕಾಯಿತು. ತಂದೆಯವರಿಗೆ ತಕ್ಕ ಮಗನಾಗಿ ತಮ್ಮ ಚಿಕ್ಕ ವಯಸ್ಸಿನಲ್ಲಿಯೆ, ೧೯೩೪ನೇ ಇಸ್ವಿ, ಹದಿನೆಂಟನೆಯ ವಯಸ್ಸಿನಲ್ಲಿಯೇ, ಕಮಲಾಪೂರ ಗ್ರಾಮದ ಪೋಲಿಸಗೌಡಕಿ ವೃತ್ತಿಯನ್ನು ದಿಟ್ಟತನದಿಂದ ಸ್ವೀಕರಿಸಿ ಯಶಸ್ವಿಯಾದಿರಿ.

## ಸತಿ–ಪತಿಗಳೊಂದಾಗಿ ಬಾಳಿದ ಭಕ್ತಿಪ್ರಿಯರೆ,

ರಂಗಮ್ಮ ತಾಯಿಯವರು ತಮ್ಮ ಧರ್ಮಪತ್ನಿಯಾಗಿ, ಆದರ್ಶ ಗೃಹಿಣಿಯಾಗಿ, ಗೃಹಲಕ್ಷ್ಮಿಯಾಗಿ ತಮ್ಮ ಸೇವೆ ಮಾಡುತ್ತ ದೊಡ್ಡ ಮನೆತನದ ಜವಾಬ್ದಾರಿಯನ್ನು ಅಷ್ಟೇ ಶ್ರದ್ಧೆಯಿಂದ ವಹಿಸಿಕೊಂಡರು. ಅದರಿಂದಾಗಿ ತಮಗೆ ಸಮಾಜ ಸೇವೆಯಲ್ಲಿ ತೊಡಗಿಕೊಳ್ಳಲು ಅನುಕೂಲವಾಯಿತು. ಆದರ್ಶ ದಂಪತಿಗಳಾದ ತಮ್ಮ ಜೀವನ ಅದು ಇತರರಿಗೂ ಆದರ್ಶಪ್ರಾಯವಾಯಿತು. ಶರಣ ಸಂಸ್ಕೃತಿಯ ಕಾಯಕ ದಾಸೋಹ ತತ್ವಗಳೆರಡೂ ತಮ್ಮ ಜೀವನದ ಹಾಸುಹೊಕ್ಕಾದವು. ಸಕಲ ಜೀವರಾಶಿಗಳಿಗೂ ಲೇಸ ಬಯಸುತ್ತ, ಬೈದವರೆನ್ನ ಬಂಧುಗಳೆನ್ನುತ್ತ, ಸಮಾಜದ, ಗ್ರಾಮದ ಒಟ್ಟಂದದ ಅಭಿವೃದ್ಧಿಗಾಗಿ ಹಗಲಿರುಳೂ ಸೇವೆ ಸಲ್ಲಿಸಿರುವಿರಿ. ಸತಿಪತಿಗಳೊಂದಾದ ತಮ್ಮ ಸೇವೆಗೆ, ನಿಸ್ಪೃಹ ಸೇವೆಗೆ, ಭಕ್ತಿಗೆ ಶಿವ ಕರುಣಿಸಿದ್ದಾನೆ ಎನ್ನುವಂತೆ, ಈ ಎಂಬತ್ತರ ಇಳಿವಯಸ್ಸಿನಲ್ಲಿಯೂ ತಾವು ಸದೃಢಕಾಯರಾಗಿ, ಸಚ್ಚಾರಿತ್ರ ಶೀಲರಾಗಿ ಬದುಕಿ, ಈಗಲೂ ಸೇವೆ ಸಲ್ಲಿಸುತ್ತಿರುವುದು ನಮ್ಮೆಲ್ಲರ ಭಾಗ್ಯ ವಿಶೇಷವಾಗಿರುತ್ತದೆ.

## ಹೃದಯ ಶ್ರೀಮಂತಿಕೆಯ ಗೌಡರೆ ,

ತಾವು ಜನಿಸಿದುದು ದೊಡ್ಡ ಮನೆತನದಲ್ಲಿ. ಧನ–ಕನಕ, ವಸ್ತು–ಒಡವೆ, ಧವಸ–ಧಾನ್ಯ, ದನ–ಕರು, ಹೊಲ–ಮನೆ, ಮಕ್ಕಳು–ಮೊಮಕ್ಕಳಿಂದ ತಮ್ಮದು ವಿಶಾಲ ಬಳಗ, ತುಂಬಿದ ಮನೆ. ಈ ಶ್ರೀಮಂತಿಕೆಗೆ ಮಿಗಿಲಾದದ್ದು ತಮ್ಮ ಹೃದಯ ಶ್ರೀಮಂತಿಕೆ. ತಮ್ಮದು ಸರ್ವರನ್ನೂ ಸಮಾನ ದೃಷ್ಟಿಯಿಂದ ಕಾಣುವ ಸಮತೋಲನಾಭಾವ. ವೈರಿಗಳನ್ನೂ ಪ್ರೀತಿಸುವ ವಿಶ್ವವಿಶಾಲ ಮನೋಬಲ. ಇವನಾರವ ಇವನಾರವ ಎಂದೆನ್ನದೆ ಎಲ್ಲ ಜಾತಿ–ಮತ–ಪಂಥ–ಪಂಗಡದ ಜನರನ್ನೂ ತಮ್ಮ ಮನೆಯ ಮಗನೆಂದೇ ಕಾಣುವ ಮಾನವೀಯ ದೃಷ್ಟಿಕೋನ. ಬಡವರಿಗೆ, ನಿರ್ಗತಿಕರಿಗೆ ಕೈಮುಚ್ಚಿ ದಾನ ಮಾಡಿ, ಸಹಾಯ ನೀಡಿದ ಪುಣ್ಯಾತ್ಮರು, ಕೈಲಾದಮಟ್ಟಿಗೆ ದಾನ ಮಾಡುವ ಪರೋಪಕಾರಿಗಳು ತಾವು.

## ಜನಪ್ರಿಯ ಶಾಸಕರೆ ,

ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯು ೧೯೫೭ನೆಯ ಸಾಲಿನಲ್ಲಿ ಜರುಗಿದ ಅಖಿಲ ಭಾರತ ಮಹಾಚುನಾವಣೆಯಲ್ಲಿ ಶಾಸನಸಭೆಯ ಟಿಕೆಟ್ಟನ್ನು ಕೊಟ್ಟು ತಮ್ಮನ್ನು ಗೌರವಿಸಿತು. ಕಾಳಗಿ ಮತಕ್ಷೇತ್ರದ ಜನತೆ ಅತ್ಯಂತ ಉತ್ಸಾಹದಿಂದ ತಮ್ಮನ್ನು ಅಧಿಕ ಮತಗಳನ್ನು ನೀಡಿ ವಿಧಾನಸಭಾ ಸದಸ್ಯರನ್ನಾಗಿ ಆರಿಸಿ ತಂದಿತು. ಐದು ವರುಷಗಳ ಕಾಲ ತಾವು ಈ ಭಾಗದ ಜನತೆಯ ಆಶೋತ್ತರಗಳನ್ನು ಈಡೇರಿಸಲು ಪ್ರಾಮಾಣಿಕರಾಗಿ ಪರಿಶ್ರಮಿಸಿರುವಿರಿ. ಹಲವಾರು ಸಹಕಾರಿ ಸಂಘ ಸಂಸ್ಥೆ, ಶಾಲಾ–ಕಾಲೇಜು, ಬ್ಯಾಂಕು, ದವಾಖಾನೆ, ನೀರಾವರಿ ಸೌಲಭ್ಯ ಹೀಗೆ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿ ಜನಹಿತ ಕಾರ್ಯಗಳನ್ನು ಕೈಕೊಂಡಿರುವಿರಿ. ತತ್ವನಿಷ್ಠರಾದ ತಾವು ಧರ್ಮದಲ್ಲಿ ಶ್ರದ್ಧೆ ಇಟ್ಟವರು, ಆತ್ಮಬಲ ಬೆಳೆಸಿಕೊಂಡವರು. ನುಡಿಯಲ್ಲಿ ಧೀರರು, ನಡೆಯಲ್ಲಿ ನಿಷ್ಠಾವಂತರು. ಲಂಚಗುಳಿತನ ತಮ್ಮಲ್ಲಿ ಸುಳಿಯದು. ಅಪ್ಪಟ ಗಾಂಧಿವಾದಿಗಳಾಗಿ, ಹಳ್ಳಿಗಳ ಉದ್ಧಾರ ಮಾಡುತ್ತ ಸಾದಾ ಉಡುಪುಧಾರಿಗಳಾಗಿ, ಚೇತನ ಸ್ವರೂಪಿಗಳಾಗಿ, ಜನಪ್ರಿಯ ಆದರ್ಶ ಶಾಸಕರಾಗಿ, ಕಾರ್ಯ ಮಾಡಿರುವಿರಿ.

## ಧರ್ಮಾಭಿಮಾನಿಗಳೆ ,

ತಾವು ಗುರು–ಲಿಂಗ–ಜಂಗಮ ಸೇವಾತತ್ಪರರು. ಶಿವಶರಣರ ಉದಾತ್ತ ಸಂಸ್ಕೃತಿಯಲ್ಲಿ ಅತ್ಯಂತ ಶ್ರದ್ಧೆಯಿಟ್ಟು ಕಾಯಕ–ದಾಸೋಹ ತತ್ವಗಳ ಪಡಿಯಚ್ಚಿನಲ್ಲಿ ಜನತೆಯನ್ನು ತಿದ್ದುತ್ತ–ತೀಡುತ್ತ ಧರ್ಮಾಭಿಮಾನಿಗಳಾಗಿ ಮೆರೆದಿರುವಿರಿ. ಮೋಸ, ಕಳವು, ಅಸತ್ಯ, ಹಿಂಸೆಗೆ ಎಳ್ಳಷ್ಟೂ ಆಸ್ಪದ ಕೊಡದೆ ಬಹುನಿಷ್ಠೆಯಿಂದ ಪೋಲಿಸಗೌಡಕಿ ವೃತ್ತಿಯನ್ನು ಯಾರ ಮನಸ್ಸೂ ನೋಯದಂತೆ ಪೂರೈಸಿದುದು ತಮ್ಮ ಬುದ್ಧಿವಂತಿಕೆಗೆ ಸಾಕ್ಷಿಯಾಗಿದೆ. ಸೌಮ್ಯ ಸ್ವಭಾವದ, ಸತತ ಕಾರ್ಯ ಚಟುವಟಿಕೆಗಳಲ್ಲಿ ಮಗ್ನರಾಗಿರುವ ತಾವು ಪ್ರಾಮಾಣಿಕರು, ದಯಾಮಯಿಗಳು. ಆತ್ಮಬಲ, ಶರೀರ ಬಲಗಳ ಸಮ್ಮಿಳನದೊಂದಿಗೆ ಸದುವಿನಯವೆ ಸದಾಶಿವನ ಒಲುಮೆಯೆಂದಂದು ಮಾನವೀಯ ಮೌಲ್ಯಗಳನ್ನು ತಮ್ಮ ಬದುಕಿನುದ್ದಕ್ಕೂ ಅಳವಡಿಸಿಕೊಂಡು, ಧರ್ಮಾಭಿಮಾನಿಗಳಾಗಿ ಶೋಭಿಸುತ್ತಿರುವಿರಿ.

## ಕಮಲಾಪೂರದ ಗೌಡರೆ,

ತಮ್ಮ ಸರಸ ಸಜ್ಜನಿಕೆಗೆ, ಕಾರ್ಯ ತತ್ಪರತೆಗೆ, ಪ್ರಾಮಾಣಿಕ ಸೇವೆಗೆ, ನಾಡನುಡಿಯ ರಾಷ್ಟ್ರಾಭಿಮಾನಕ್ಕೆ ಮೆಚ್ಚಿಕೊಂಡ ರಾಷ್ಟ್ರ ನಾಯಕರು 'ಕಮಲಾಪೂರ' ಎಂದರೆ ಶಂಕರಶೆಟ್ಟಿ ಪಾಟೀಲರ ಗ್ರಾಮ ಎಂದು ಉದ್ಗಾರ ತೆಗೆದದ್ದರಲ್ಲಿ ಎರಡು ಮಾತಿಲ್ಲ. ವೈರಿಗಳನ್ನು ಪ್ರೀತಿಸುವ ಉದಾತ್ತಗುಣ, ತಮ್ಮದು ನುಡಿ-ನಡೆಯು ಸಮರಸ ಜೀವನ. ತಾವೆಂದೂ ಸ್ವಾರ್ಥಕ್ಕಂಟಿಕೊಂಡವರಲ್ಲ. ಕೀರ್ತಿಶನಿಯ, ವಾರ್ತಾಪ್ರಚಾರದ ಬೆನ್ನು ಹತ್ತಿದವರಲ್ಲ. ತಮ್ಮನ್ನೇ ಆ ಕೀರ್ತಿ ಬೆನ್ನು ಹತ್ತಿ ಬಂದದ್ದು. ಅದಕ್ಕೆ ತಮ್ಮ ಧೀರ ಕಾಯಕನಿಷ್ಠೆಯೆ ಕಾರಣ.

ಅಸ್ಥಿರಂ ಜೀವಿತಂ ಲೋಕೇ ಅಸ್ಥಿರೇ ಧನ ಯೌವನೇ/
ಅಸ್ಥಿರಾ ಪುತ್ರದಾರಾಶ್ಚಧರ್ಮಃ ಕೀರ್ತಿರ್ದ್ವಯಂ ಸ್ಥಿರಂ/

ಎಂದಹಾಗೆ ತಾವು ಎಂದೆಂದಿಗೂ ಸ್ಥಿರವಾಗಿ ಉಳಿಯುವಂತಹ ಧರ್ಮ ಮತ್ತು ಕೀರ್ತಿಯನ್ನು ಗಳಿಸಿ ಪುಣ್ಯವಂತರಾಗಿ ಕಮಲಾಪೂರದ ಶ್ರೀಶಂಕರಶೆಟ್ಟಿ ಗೌಡರಾಗಿ ಬಾಳುತ್ತಿರುವುದು ನಮ್ಮ ನಾಡಿನ ಪುಣ್ಯವೆಂದೇ ಭಾವಿಸುತ್ತೇವೆ. ತಮ್ಮನ್ನು ಹೆತ್ತು, ಹೊತ್ತ ತಂದೆ ತಾಯಿಗಳು ಎಷ್ಟು ಪುಣ್ಯವಂತರೊ ಅಷ್ಟೇ ಪುಣ್ಯವಂತರು ಈ ಗ್ರಾಮದ, ಈ ಭಾಗದ ಜನತೆ ಎಂದರೆ ಅತಿಶಯೋಕ್ತಿಯ ಮಾತೇನಲ್ಲ.

## ಸಚ್ಚಾರಿತ್ರ್ಯಶೀಲರೆ,

ಸಚ್ಚಾರಿತ್ರ್ಯಶೀಲರಾದ ತಾವು ನಮ್ಮ ಈ ಆಮಂತ್ರಣ ಮಾನ್ಯಮಾಡಿ ವರ್ಧಂತಿ ಮಹೋತ್ಸವದಲ್ಲಿ ಭಾಗಿಗಗಳಾಗಿ ಸಂತೋಷಪಡಿಸಿದ್ದೀರಿ. ಸದ್ಗುರು ಶ್ರೀಚೆನ್ನಬಸವ ಶಿವಯೋಗಿಗಳು ತಮಗೂ ತಮ್ಮ ಧರ್ಮಪತ್ನಿಯವರಿಗೂ ಇನ್ನೂ ಹೆಚ್ಚಿನ ಆಯುರಾರೋಗ್ಯಭಾಗ್ಯಗಳನ್ನು ಕರುಣಿಸಲಿ ಎಂದು ಭಕ್ತಿಪೂರ್ವಕ ಪ್ರಾರ್ಥಿಸುತ್ತೇವೆ.

**ವಿಶ್ವನಾಥ ಪಾಟೀಲ, ಹೆಬ್ಬಾಳ**
ಸ್ವಾಗತಾಧ್ಯಕ್ಷರು

**ಷ.ಬ್ರ.ಶ್ರೀಚನ್ನವೀರ ಶಿವಾಚಾರ್ಯರು,**
ಹಾರಕೂಡ
ಗೌರವಾಧ್ಯಕ್ಷರು

**ಶಂಕರಶೆಟ್ಟಿ ಮಾಲಿಪಾಟೀಲ, ಕಮಲಾಪೂರ**
ಉಪಾಧ್ಯಕ್ಷರು.





ಬೆಂಗಳೂರಿನ ಮಾರ್ಕೆಟಿಂಗ್ ಫೆಡರೇಶನ್ ಕಾರ್ಯಕ್ರಮದಲ್ಲಿ
ಸಹಕಾರ ಸಚಿವ ನಾಡಗೌಡರೊಂದಿಗೆ ಪಾಟೀಲರು



ಉಪರಾಷ್ಟ್ರಪತಿಗಳಾಗಿದ್ದ ಬಿ.ಡಿ. ಜತ್ತಿ ಅವರು
ಕಮಲಾಪೂರಕ್ಕೆ ಆಗಮಿಸಿದಾಗ ಪಾಟೀಲರಿಂದ ಸನ್ಮಾನ





ದೆಹಲಿಯ ಅಖಿಲ ಭಾರತ
ಸಹಕಾರ ತರಬೇತಿ ಸಂಸ್ಥೆಯ ಶಿಬಿರದಲ್ಲಿ ಪಾಟೀಲರು



ಕರ್ನಾಟಕ ಸರಕಾರದ ಪರವಾಗಿ ಮಾಜಿ ಮಂತ್ರಿ ಧರ್ಮಸಿಂಗ್ ಅವರು
ಶಂಕರಶೆಟ್ಟಿ ಪಾಟೀಲರನ್ನು ಗೌರವಿಸುತ್ತಿರುವುದು

ಸ್ವಿಸ್ - ಇಂಡಿಯಾದ ಮೈರಾಡ ಸಂಸ್ಥೆಯ
ಗ್ರಾಮೀಣಾಭಿವೃದ್ಧಿ ಸಭೆಯಲ್ಲಿ ಮುಖ್ಯ ಅತಿಥಿಯಾಗಿ ಪಾಟೀಲರು

ಮಾಜಿ ಸ್ಪೀಕರ್ ರಮೇಶಕುಮಾರ ಅವರು
ಸಮಾಜಸೇವಾನಿಷ್ಠ ಶಂಕರಶೆಟ್ಟಿ ಪಾಟೀಲರನ್ನು ಸತ್ಕರಿಸುತ್ತಿರುವುದು





ಕೆ. ಬಿ. ಶಾಣಪ್ಪ ಅವರು ಶಂಕರಶೆಟ್ಟಿ ಪಾಟೀಲರನ್ನು ಸನ್ಮಾನಿಸುತ್ತಿರುವುದು



ಶಂಕರಶೆಟ್ಟಿ ಪಾಟೀಲರು ಧರ್ಮಪತ್ನಿ ರಂಗಮ್ಮ ಅವರೊಂದಿಗೆ




ಶಂಕರಶೆಟ್ಟಿ ಪಾಟೀಲರ ಪರಿವಾರ



ಲಿಂ. ರಂಗಮ್ಮ ಗೌಡತಿ





ಕರ್ನಾಟಕ ರಾಜ್ಯ ಸಹಕಾರ ಸಮ್ಮೇಳನದಲ್ಲಿ (1995)
ಶಂಕರಶೆಟ್ಟಿ ಪಾಟೀಲರು



## ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

### ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ|| ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ|| ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ|| ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ|| ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ|| ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ|| ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 20–00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |